## ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೨೫

# ಅಜಂತ ಮತ್ತು ಎಲ್ಲೋರ

ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್.





ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
ಮೈಸೂರು
೧೯೪೧



ಬೆಲೆ: ೩ ಆಣೆ



ಭಿಕ್ಷುಬುದ್ಧ—ಪತ್ನೀಪುತ್ರರು

By courtesy of the Archæological Dept. of
H. E. H. the Nizam's Govt.

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ - ೨೫

# ಅಜಂತ ಮತ್ತು ಎಲ್ಲೋರ

ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್.




ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೪೧

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಚಾನ್ಸಲರವರಾದ ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದೂರ್ ಅವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ, ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆಮಾಡಿದರು. ಅವುಗಳಲ್ಲಿ ವಿಶೇಷವಾದವು ಇವೆರಡು: ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ. ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣ ಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನು ಪಡೆದಿಲ್ಲದ, ಸಂಸ್ಥಾನದ ದೂರ ಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ವಿಶ್ವವಿದ್ಯಾನಿಲಯವು ಸ್ಥಾಪಿತವಾದಂದಿನಿಂದಲೂ ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚುಹಾಕಿಸಿದೆ; ಅಲ್ಲದೆ, ಸಾಹಿತ್ಯವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪ

ನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚೆಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದು ಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ: ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿ ಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನೂ ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಅದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗ ಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಹರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ಆಳಿದ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿದರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡು ಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು ಲಘು ಪುಸ್ತಕಗಳನ್ನು ಸಿದ್ಧಮಾಡಿದವರ ನಿರೀಕ್ಷೆ ಮತ್ತು ಹೆಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು,<br>೧೫—೮—೧೯೪೦. | ಎನ್. ಎಸ್. ಸುಬ್ಬರಾವ್.

## ವಿಷಯಾನುಕ್ರಮಣಿಕೆ

# ಅಜಂತ ಮತ್ತು ಎಲ್ಲೋರ

## ೧. ಪ್ರವೇಶ

ಕ್ರಿಸ್ತಾಬ್ದ ಹದಿನೆಂಟನೆಯ ಶತಮಾನದ ಆದಿಯವರೆಗೆ ನಮ್ಮ ಮಾತೃಭೂಮಿಯಾದ ಭಾರತವು ಜಗತ್ತಿನ ದೇಶಗಳ ಲ್ಲೆಲ್ಲಾ ಬಹಳ ಮುಖ್ಯಸ್ಥಾನವನ್ನು ಪಡೆದಿತ್ತು. ಇದರ ಪ್ರಸಿದ್ಧಿಗೆ ನಿಬಿಡವಾದ ಇಲ್ಲಿಯ ಜನಸಂಖ್ಯೆಯೂ, ಸ್ವತಂತ್ರ ವಾದ ಇಲ್ಲಿಯ ಚಕ್ರಾಧಿಪತ್ಯಗಳೂ, ವಿಖ್ಯಾತವಾದ ಇಲ್ಲಿಯ ಐಶ್ವರ್ಯವೂ ಮಾತ್ರವೇ ಅಲ್ಲದೆ ಇವಕ್ಕಿಂತಲೂ ಹೆಚ್ಚಾಗಿ ಇಲ್ಲಿಯ ಋಷಿಗಳೂ ಆಚಾರ್ಯರೂ ಉಪದೇಶಮಾಡಿದ ವೇದಾಂ ತಾದಿ ತತ್ವಗಳೂ, ಕವಿಗಳು ರಚಿಸಿದ ಕಾವ್ಯನಾಟಕಾದಿಗಳೂ, ವಿದ್ವಾಂಸರು ಬೆಳಸಿದ ಆಯುರ್ವೇದ ಜ್ಯೋತಿಷ ಮೊದಲಾದ ಶಾಸ್ತ್ರಗಳೂ, ಮಹಾಶಿಲ್ಪಿಗಳು ವೃದ್ಧಿಮಾಡಿದ ವಾಸ್ತು ಮೊದ ಲಾದ ಲಲಿತಕಲೆಗಳೂ ಕಾರಣಗಳಾದವು. ಕಲಾ ಪ್ರಪಂಚದಲ್ಲಿ ನಮ್ಮ ಪೂರ್ವಿಕರು ಸಾಧಿಸಿದ ಔನ್ನತ್ಯವು ಪ್ರಾಚೀನ ಗ್ರೀಸ್, ರೋಮ್‌ಗಳನ್ನೂ ಒಳಗೊಂಡ ಒಟ್ಟು ಯೂರೋಪ್ ಖಂಡದ ಕಲೆಯೊಂದಿಗೆ ಸರಿತೂಗುವುದು. ಭಾರತೀಯ ಕೃತಿಗಳು ಕಾಲ ವಿಸ್ತಾರದಿಂದಲೂ ಸಂಖ್ಯೆಯಿಂದಲೂ ಮಾತ್ರವಲ್ಲದೆ ತಮ್ಮ ನೈಜವಾದ ಸ್ವಾತಂತ್ರ್ಯದಿಂದಲೂ, ಗುಣಾತಿಶಯದಿಂದಲೂ ಗಣನಾರ್ಹವಾಗಿವೆ.

ಕಲೆಗಳಲ್ಲಿ ಕಾವ್ಯವು ಅತ್ಯುತ್ತಮವಾದುದೆಂಬುದು ಅನೇಕ ಮಹನೀಯರ ಅಭಿಪ್ರಾಯ. ಪ್ರಕೃತಿಯಲ್ಲೂ, ಮನುಷ್ಯರಲ್ಲೂ, ಜೀವಜಂತುಗಳಲ್ಲೂ ನೈಸರ್ಗಿಕವಾದ ವಿಶ್ವಾಸವನ್ನಿಟ್ಟು

ಲೋಕದ ಸೌಂದರ್ಯವನ್ನೂ, ಭಗವಂತನ ಔದಾರ್ಯವನ್ನೂ, ಜನಸಾಮಾನ್ಯದ ಸುಖದುಃಖಗಳನ್ನೂ ತಮ್ಮ ಹೃದಯದಲ್ಲಿ ಅನುಭವಿಸಿ ಆ ಮನೋಭಾವಗಳನ್ನು ವರ್ಣಿಸಿ ಸಹೃದಯರ ಮನಸ್ಸಿನಲ್ಲಿ ಅದೇ ಅನುಭವಗಳನ್ನುಂಟುಮಾಡಿ ಆನಂದಪಡಿಸು ವುದಕ್ಕೆ ಕವಿತೆಯಂತಹ ಸಾಧಕವು ಬೇರೆ ಇಲ್ಲ. ಆದರೆ ಮನೋ ಭಾವಗಳನ್ನು ಸೂಚಿಸುವುದರಲ್ಲಿ ಕಾವ್ಯಕಲೆಯನ್ನು ಸ್ವಲ್ಪ ಹೆಚ್ಚುಕಡಿಮೆಯಾಗಿ ಹೋಲುವಂತಹ ಬೇರೆ ಮಾರ್ಗಗಳು ಲಲಿತಕಲೆಗಳಾಗಿ ಪರಿಣಮಿಸಿವೆ. ಅವುಗಳಲ್ಲಿ ಒಂದೊಂದಕ್ಕೂ ಸಹಜವಾದ ಹಲಕೆಲವು ಗುಣಗಳಿರುವುವು. ಈ ಲಲಿತಕಲೆ ಗಳಲ್ಲಿ ಒಂದೊಂದರಲ್ಲೂ ಪ್ರಾಚೀನ ಭಾರತೀಯರು ನಿಪುಣ ರೆನಿಸಿಕೊಂಡರು. ಇವುಗಳಲ್ಲಿ ಸಂಗೀತ, ನಾಟ್ಯ, ವಾಸ್ತುಶಿಲ್ಪ, ಪ್ರತಿಮಾಶಿಲ್ಪ, ಚಿತ್ರಕಲೆ ಇವುಗಳು ಭಾರತದಲ್ಲಿ ಬಹಳ ವೃದ್ಧಿ ಯಾದುವು. ಇವುಗಳ ಚರಿತ್ರೆಯೂ ವಿಸ್ಮಯವನ್ನುಂಟು ಮಾಡತಕ್ಕದಾಗಿದೆ. ಇಲ್ಲಿ ಅಜಂತ ಮತ್ತು ಎಲ್ಲೋರ ಗುಹೆ ಗಳ ವಾಸ್ತುಶಿಲ್ಪ ಮತ್ತು ಚಿತ್ರಕಲೆಗಳು ಪ್ರಾಚೀನಭಾರತದಲ್ಲಿ ಪಡೆದ ಉತ್ಕೃಷ್ಟಸ್ಥಿತಿಯನ್ನು ಮಾತ್ರ ವಿವರಿಸಲು ಯತ್ನ ಮಾಡಿದೆ.

ಭಾರತದಲ್ಲಿ ಚಿತ್ರಕಲೆಯು ಶಿಲಾಯುಗದಿಂದ ಆರಂಭಿಸಿ ಇಂದಿನವರೆಗೂ ಜೀವನದಿಯಂತೆ ಅವಿಚ್ಛಿನ್ನವಾಗಿ ಪ್ರವಹಿಸು ತ್ತಿದೆ. ಶಿಲಾಯುಗದ ಜನರು ಮಧ್ಯಪ್ರಾಂತಗಳ ರಾಯಘರ್ ಸಂಸ್ಥಾನದಲ್ಲಿ ಸಿಂಗನಪುರವೆಂಬ ಗ್ರಾಮದ ಬಳಿಯ ಗವಿಗಳಲ್ಲಿ ಬರೆದಿರುವ ಮನುಷ್ಯರ ಮತ್ತು ಪ್ರಾಣಿಗಳ ಚಿತ್ರಗಳೂ ಬೇಟೆಗಳ ನಕ್ಷೆಗಳೂ ಈಚಿಗೆ ಸಿಕ್ಕಿವೆ. ರಾಮಾಯಣ ಮಹಾಭಾರತ ಮೊದಲಾದ ಸಂಸ್ಕೃತಗ್ರಂಥಗಳಲ್ಲೂ ಚಿತ್ರಕಲೆಯ ಪ್ರಾಚೀನತೆ

ಉಕ್ತವಾಗಿದೆ. ಪ್ರಾಚೀನಭಾರತದ ಅರಮನೆಗಳಲ್ಲಿ ಚಿತ್ರಾಲಂ ಕೃತವಾದ ಗೋಡೆಗಳಿಂದ ಕೂಡಿದ ಶಾಲೆಗಳು ಇದ್ದುವೆಂದು ರಾಮಾಯಣ ಭಾರತಗಳಿಂದಲೂ ತ್ರಿಪಿಟಕಾದಿ ಬೌದ್ಧಗ್ರಂಥ ಗಳಿಂದಲೂ ತಿಳಿಯಬರುತ್ತದೆ. ಕಾಮಸೂತ್ರಕಾರನಾದ ವಾತ್ಸ್ಯಾಯನನು ಕ್ರಿಸ್ತಾಬ್ದ ಮೂರನೆಯ ಶತಮಾನದಲ್ಲಿ ಚಿತ್ರ ಕಲೆಗೆ ಆರು ಅಂಗಗಳಿರಬೇಕೆಂಬುದನ್ನು ಹೀಗೆ ವರ್ಣಿಸಿರುವನು:

ರೂಪಭೇದಃ ಪ್ರಮಾಣಂಚ
ಭಾವೋ ಲಾವಣ್ಯಯೋಜನಂ ।
ಸಾದೃಶ್ಯಂ ವರ್ಣಿಕಾಭಂಗಃ
ಷಡಂಗಾಃ ಪರಿಕೀರ್ತಿತಾಃ ॥

ಗುಪ್ತರಾಜರ ಕಾಲದಲ್ಲಿ ಭಾರತದಿಂದ ಚಿತ್ರಕಲೆಯನ್ನು ಚೀಣರು ಕಲಿತುದಾಗಿ ಹ್ಸಿಯೆ-ಹೊ ಎಂಬ ಚೀಣನು ಬರೆದಿರು ವನು. ಚಿತ್ರಲಕ್ಷಣ, ವಿಷ್ಣುಧರ್ಮೋತ್ತರ ಮೊದಲಾದ ಗ್ರಂಥ ಗಳಲ್ಲಿ ಈ ಕಲೆಯ ಅನೇಕ ಲಕ್ಷಣಗಳು ಉಕ್ತವಾಗಿವೆ. ಮೌರ್ಯರ ಕಾಲದಿಂದೀಚೆಗೆ ಅಲ್ಲಲ್ಲೇ ಬರೆಯಲ್ಪಟ್ಟಿರುವ ಸ್ಫೂರ್ತಿಯುಕ್ತ ವಾದ ಚಿತ್ರಗಳು ದೊರೆಯುತ್ತವೆ. ಗ್ವಾಲಿಯರ್ ಸಂಸ್ಥಾನದ ಬಾಗ್, ನೈಜಾಮಿರಾಜ್ಯದ ಅಜಂತ ಎಲ್ಲೋರ, ಪುದುಕೋಟೆ ಸಂಸ್ಥಾನದ ಸಿತ್ತನವಾಸಿಲ್, ಸಿಂಹಳದ್ವೀಪದ ಪರ್ವತಮಧ್ಯ ದಲ್ಲಿರುವ ಸಿಗಿರಿಯ ಮೊದಲಾದ ಸ್ಥಳಗಳು ಪ್ರಾಚೀನ ಭಾರತೀ ಯರು ಮಾಡಿದ ಉತ್ಕೃಷ್ಟಕಾರ್ಯವನ್ನು ಎತ್ತಿ ತೋರಿಸುತ್ತವೆ.

ಮುಸಲ್ಮಾನರು ಉತ್ತರದೇಶವನ್ನು ಆಕ್ರಮಿಸಿ ತಮ್ಮ ಚಕ್ರಾ ಧಿಪತ್ಯವನ್ನು ಕಟ್ಟಿಕೊಂಡ ಮೇಲೆ ಭಾರತೀಯ ಚಿತ್ರಕಲೆಯು ಎರಡುರೀತಿಗಳಲ್ಲಿ ಮತ್ತೆ ಅರಳಿತು. ಮುಸಲ್ಮಾನರಾಜರೂ ಅಧಿ ಕಾರಿಗಳೂ ತಮ್ಮ ಭಾವಚಿತ್ರಗಳನ್ನೂ, ಪ್ರಾಣಿಗಳ ಚಿತ್ರ

ಗಳನ್ನೂ, ಬೇಟೆಯೇ ಮೊದಲಾದ ಸಂತೋಷಜನಕವಾದ ಕೆಲಸ
ಗಳನ್ನು ಚಿತ್ರಿಸುವ ಪಟಗಳನ್ನೂ ಬರೆಯುವುದಕ್ಕೆ ವಿಶೇಷವಾಗಿ
ಪ್ರೋತ್ಸಾಹಕೊಟ್ಟರು. ಇವಕ್ಕೆ ಮೊಗಲ ಚಿತ್ರಗಳೆಂದು ಹೆಸರು.
ಇದೇ ಕಾಲದಲ್ಲಿ ಹಿಂದೂಜನಗಳು ಪೌರಾಣಿಕ ಕಥೆಗಳನ್ನೂ,
ತೀರ್ಥಯಾತ್ರಿಕರ ಅನುಭವಗಳನ್ನೂ, ದೇವರುಗಳ ಚಿತ್ರಗಳನ್ನೂ
ಹ್ರಸ್ವಾಕೃತಿಯಲ್ಲಿ ಬರೆಸುತ್ತಿದ್ದರು. ಇದಕ್ಕೆ ರಾಜಪುತ್ರರೀತಿ
ಎಂದು ಹೆಸರಾಗಿದೆ. ಮೊಗಲರ ಕಾಲದಲ್ಲಿ ದಕ್ಷಿಣದೇಶದ
ಕಲೆಗಳಿಗೆ ಕೇಂದ್ರಸ್ಥಾನವಾದ ವಿಜಯನಗರದಲ್ಲೂ ಇದರ ಉಪ
ರಾಜಧಾನಿಗಳಲ್ಲೂ ಕರ್ಣಾಟಕ ಚಿತ್ರರೀತಿಯೊಂದು ಬೆಳೆಯಿತು.
ಈ ಕೆಲಸವನ್ನು ಹಂಪಿ, ಲೇಪಾಕ್ಷಿ ಮೊದಲಾದ ಕಡೆಗಳಲ್ಲಿ
ನೋಡಬಹುದು. ಈ ಪ್ರಾಚೀನ ಕಲೆಯು ಕ್ರಿ. ಹತ್ತೊಂಭ
ತ್ತನೆಯ ಶತಮಾನದ ವೇಳೆಗೆ ಬಹಳ ಹೀನಸ್ಥಿತಿಗೆ ಬಂದಿತ್ತು.
ಆಗ ಅಜಂತದ ಕಲೆಯು ಜನಗೋಚರವಾಯಿತು. ಇದನ್ನು
ಅನುಕರಿಸಿ ಅವನೀಂದ್ರನಾಥ ಠಾಕೂರ್ ಮೊದಲಾದ ಮಹ
ನೀಯರು ನವೀನ ಭಾರತೀಯ ರೀತಿಯೊಂದನ್ನು ಸ್ಥಾಪಿಸಿ
ದರು. ಹೀಗೆ ಭಾರತದ ಚಿತ್ರಕಲೆಯು ಅನೇಕ ಸಾವಿರ ವರ್ಷ
ಗಳಿಂದ ಅನೂಚಾನವಾದ ಪ್ರಶಸ್ತಿಯನ್ನು ಪಡೆದಿದೆ.

ಚಿತ್ರಗಳಿಗಿಂತಲೂ ಶಿಲೆಯ ಕಟ್ಟಡಗಳೂ ಮೂರ್ತಿಗಳೂ
ಚಿರಸ್ಥಾಯಿಗಳು. ಹಿಂದಿನ ಭಾರತೀಯರು ಸುಲಕ್ಷಣಯುಕ್ತ
ವಾದ ಕಟ್ಟಡಗಳನ್ನು ನಾನಾರೀತಿಗಳಲ್ಲಿ ಕಟ್ಟುತ್ತಿದ್ದರು. ಈ
ಶಿಲ್ಪರೀತಿಗಳಲ್ಲಿ ಪ್ರಸಿದ್ಧವಾದುವು: ಬೌದ್ಧರೀತಿ, ಗುಹಾಶಿಲ್ಪ,
ಔತ್ತರೇಯರೀತಿ, ದ್ರಾವಿಡರೀತಿ, ಕರ್ಣಾಟಕ ಅಥವಾ ಚಾಳು
ಕ್ಯರೀತಿ, ಮತ್ತು ಹಿಂದೂ-ಮುಸ್ಲಿಂ ರೀತಿ—ಇವುಗಳನ್ನು ಅನು
ಸರಿಸಿ ಸುಮಾರು ಎರಡುಸಾವಿರ ವರ್ಷಗಳಿಂದ ಭಾರತೀಯ

ಸ್ಥಪತಿಗಳು ಕಟ್ಟಿದ ಕಟ್ಟಡಗಳು ನಮ್ಮ ದೇಶದ ವಾಸ್ತು ಶಿಲ್ಪದ ಔನ್ನತ್ಯವನ್ನು ಇಂದಿಗೂ ಸಾರುತ್ತಿವೆ. ಕಟ್ಟಡಗಳನ್ನು ಅಲಂಕರಿಸುವುದಕ್ಕೆ ಗೋಡೆಗಳಲ್ಲೂ ಕಂಬಗಳಲ್ಲೂ ಚಾವಣಿಗಳಲ್ಲೂ ಕೊರೆದ ಅಲಂಕಾರಗಳನ್ನೂ ವಿವಿಧವಾದ ಪ್ರತಿಮೆಗಳನ್ನೂ ಶಿಲ್ಪಿಗಳು ಉಪಯೋಗಿಸುತ್ತಿದ್ದರು. ಇಂತಹ ಮೂರ್ತಿಗಳನ್ನು ಮಾಡುವುದಕ್ಕೆ ಶಿಲೆ, ಲೋಹ, ಮರ, ದಂತ, ರತ್ನ ಮೊದಲಾದ ಪದಾರ್ಥಗಳು ಉಪಯುಕ್ತವಾಗಿದ್ದುವು. ಶಿಲ್ಪಿತಮೂರ್ತಿಗಳು ಮತ್ತು ಅಲಂಕಾರಗಳು ವಾಯವ್ಯದ ಗಾಂಧಾರಮಾರ್ಗ, ಗುಪ್ತರ ಕಾಲದ ನಾಗರ ಮಾರ್ಗ, ದಕ್ಷಿಣದ ದ್ರಾವಿಡಮಾರ್ಗ, ದಖನ್ನಿನ ಕರ್ಣಾಟಕ ಮಾರ್ಗ, ಮುಸಲ್ಮಾನರ ಕಾಲದ ಹಿಂದೂ-ಮುಸ್ಲಿಂ ಮಾರ್ಗ ಮೊದಲಾದ ಮುಖ್ಯಮಾರ್ಗಗಳನ್ನು ಅನುಸರಿಸಿವೆ. ಭಾರತೀಯ ಶಿಲ್ಪದ ಕಥೆಯು ಪಾಶ್ಚಾತ್ಯ ಕಲಾಪ್ರೇಮಿಗಳಿಗೆ ಆಶ್ಚರ್ಯವನ್ನುಂಟುಮಾಡಿದೆ.

ಭಾರತೀಯ ಕಲಾಚರಿತ್ರೆಯಲ್ಲಿ ಈ ದೇಶದ ಮುಖ್ಯ ಭಾಗಗಳೆಲ್ಲವೂ ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾದ ಸ್ಥಾನವನ್ನು ಹೊಂದಿವೆ. ಆದರೆ ಉತ್ತರದೇಶದ ಪ್ರಾಚೀನ ಹಿಂದುಗಳು ಕಟ್ಟಿದ ಕಟ್ಟಡಗಳೂ, ಕೊರೆದ ಮೂರ್ತಿಗಳೂ ಬರೆದ ಚಿತ್ರಗಳೂ ನಮ್ಮ ಇತಿಹಾಸದ ಮಧ್ಯ ಯುಗದಲ್ಲಿ ಒದಗಿದ ವಿವಿಧ ಪರಿವರ್ತನೆಗಳಿಂದಲೂ ಕಾಲವಶದಿಂದಲೂ ಬಹಳಮಟ್ಟಿಗೆ ನಷ್ಟವಾಗಿವೆ. ಪರಕೀಯರ ಕೈಗೆ ಹೆಚ್ಚಾಗಿ ಸಿಕ್ಕದೆ ಬೆಟ್ಟಗುಡ್ಡಗಳಿಂದ ಆವೃತವಾಗಿರುವ ದಖನ್ನಿನಲ್ಲಿ ಮಾತ್ರ ಪ್ರಾಚೀನರ ಕೆಲಸವು ನಾಶವಾಗದೆ ಅಲ್ಲಲ್ಲಿ ನೋಡಲು ಸಿಕ್ಕುತ್ತದೆ. ದಖನ್ನಿಗೆ ಮಧ್ಯರಾಷ್ಟ್ರವಾಗಿರುವ ನೈಜಾಮಿರಾಜ್ಯವು ಸುಮಾರು ೮೦ ಸಾವಿರ

ಚದರ ಮೈಲಿಗಳ ವಿಸ್ತೀರ್ಣವುಳ್ಳದ್ದಾಗಿಯೂ, ಒಂದೂವರೆ
ಕೋಟಿ ಜನಸಂಖ್ಯೆಯುಳ್ಳದ್ದಾಗಿಯೂ ಇದೆ. ಇದರ ಪೂರ್ವಾ
ರ್ಧವಾದ ಆಂಧ್ರ ಪ್ರಾಂತ್ಯದ ಓರಂಗಲ್ಲು, ಹನುಮಕೊಂಡ,
ರಾಮಪ್ಪ, ಭದ್ರಾಚಲ, ಗೋಲುಕೊಂಡ ಮೊದಲಾದ ಎಡೆ
ಗಳಲ್ಲಿ ಕಾಕತೀಯರ ಮತ್ತು ಮುಸಲ್ಮಾನರ ಕಾಲದ ಪ್ರಾಚೀನ
ಕಟ್ಟಡಗಳೂ, ನೈರುತ್ಯದ ಕಾಲುಭಾಗವಾದ ಕರ್ಣಾಟಕ
ಪ್ರಾಂತ್ಯದಲ್ಲಿ ಇಟ್ಟಗಿ, ಕುರುವತ್ತಿ, ರಾಯಚೂರು, ಕಲುಬುರ್ಗಿ,
ಕೊಪ್ಪಳ, ಮಾನ್ಯಖೇಡ, ಬಿದರೆ ಮೊದಲಾದ ಪ್ರಾಚೀನ
ಸ್ಥಳಗಳೂ, ವಾಯವ್ಯದ ಕಾಲುಭಾಗವಾದ ಮಹಾರಾಷ್ಟ್ರ
ಪ್ರಾಂತ್ಯದಲ್ಲಿ ಔಂಢ್, ನಾಂದೇಡ, ತುಳಜಾಪುರ, ಔರಂಗಾ
ಬಾದ್ ಮೊದಲಾದ ಪ್ರಸಿದ್ಧ ವಾಸ್ತುಪ್ರದೇಶಗಳೂ ಇವೆ.
ಇವೆಲ್ಲಕ್ಕಿಂತಲೂ ಆ ರಾಜ್ಯಕ್ಕೆ ಕಲಾಚರಿತ್ರೆಯಲ್ಲಿ ಉನ್ನತ
ಸ್ಥಾನವನ್ನು ದೊರಕಿಸಿ ಕೊಟ್ಟಿರುವುವು ಔರಂಗಾಬಾದಿನ
ಉತ್ತರಕ್ಕೆ ವಾಯವ್ಯದ ಮೂಲೆಯ ಸಮೀಪದಲ್ಲಿರುವ ಅಜಂತ
ಮತ್ತು ಎಲ್ಲೋರ ಗುಹೆಗಳು. ಅಮೋಘವಾದ ತಮ್ಮ ಈ
ಆಸ್ತಿಯನ್ನು ಕಲಾಪ್ರೇಮಿಗಳಾದ ನೈಜಾಮಿ ಸರ್ಕಾರದವರು
ಅನೇಕ ಲಕ್ಷ ರೂಪಾಯಿಗಳ ವೆಚ್ಚವನ್ನು ಮಾಡಿ ಬಹು
ಶ್ರಮಪಟ್ಟು ಕಾಪಾಡಿಕೊಂಡು ಬರುತ್ತಿದ್ದಾರೆ. ಈ ಮೂಲೆ
ಭಾರತೀಯ ಸಂಸ್ಕೃತಿಗೂ, ಕಲಾಪ್ರಪಂಚಕ್ಕೂ ಅವು
ಮಾಡಿರುವ ಉಪಕಾರವನ್ನು ಎಷ್ಟು ಕೊಂಡಾಡಿದರೂ
ಸಾಲದು. ಜಗತ್ತಿನ ಕಲಾಭಿಜ್ಞರಿಗೆಲ್ಲಾ ಅಜಂತ ಮತ್ತು
ಎಲ್ಲೋರಗಳು ಪುಣ್ಯಕ್ಷೇತ್ರಗಳಾಗಿ ಪರಿಣಮಿಸಿವೆ.

———

# ೨. ಅಜಂತ

ನೈಜಾಮಿಾ ರಾಜ್ಯದ ವಾಯುವ್ಯದ ಗಡಿಯಲ್ಲಿ ಔರಂಗಾಬಾದಿಗೂ ಬ್ರಿಟಿಷರಿಗೆ ಸೇರಿದ ಜಲಗಾಂವ್ ಎಂಬ ಊರಿಗೂ ನಡುವೆ ಅನೇಕ ಸಣ್ಣ ಬೆಟ್ಟಗುಡ್ಡಗಳಿವೆ. ಇವುಗಳಲ್ಲಿ ಹುಟ್ಟಿದ ಹಲಕೆಲವು ನದಿಗಳು ಉತ್ತರಮುಖವಾಗಿ ತಪತಿ ನದಿಗೂ ಪೂರ್ವ ಮತ್ತು ದಕ್ಷಿಣ ಮುಖವಾಗಿ ಗೋದಾವರಿ ನದಿಗೂ ಹೋಗಿ ಸೇರುತ್ತವೆ. ಈ ಬೆಟ್ಟಗಳ ನೈರುತ್ಯದ ಮೂಲೆಯಲ್ಲಿ ಎಲ್ಲೋರವೂ ವಾಯುವ್ಯದ ಮೂಲೆಯಲ್ಲಿ ಅಜಂತವೂ ಇವೆ. ಉತ್ತರದ ಗಿರಿಶ್ರೇಣಿಯಲ್ಲಿ ಹುಟ್ಟಿದ ವಾಘೋರ ಎಂಬ ಸಣ್ಣ ನದಿಯೊಂದು ಹಾವಿನಂತೆ ಬೆಟ್ಟಗಳಲ್ಲಿ ಬಳಸಿ ಬಂದು ಫರ್ದಾಬಾದಿನ ಮಗ್ಗುಲಲ್ಲಿ ಈಶಾನ್ಯಕ್ಕೆ ಹರಿದು ಹೋಗುತ್ತದೆ. ಈ ಹೊಳೆಯು ಅನೇಕ ಲಕ್ಷ ವರ್ಷಗಳಿಂದ ಬೆಟ್ಟಗಳಲ್ಲಿ ಪ್ರವಹಿಸಿ ಅವುಗಳ ಮಧ್ಯೆ ಆಳವಾದ ಹಳ್ಳವನ್ನು ಕೊರೆದು ಒಂದೆಡೆಯಲ್ಲಿ ಗುಡ್ಡದಿಂದ ಕೆಳಕ್ಕೆ ಧುಮುಕಿ ಹರಿದು ಬರುತ್ತದೆ. ಈ ಜಲಪಾತದ ಸಮಿಾಪದಲ್ಲಿ ನದಿಯ ಆಕಾರವು ವೀರರೇಖೆಯಂತೆ ಬಾಗಿದೆ. ಕೆಲವು ಮೈಲಿಗಳ ವರೆಗೆ ಸುತ್ತಲೂ ಕಾಡು. ಹೊಳೆಯ ಇಕ್ಕಡೆಗಳಲ್ಲೂ ಎತ್ತರವಾದ ಕಡಿದಾದ ಬೆಟ್ಟಗಳು. ಹೊಳೆಯಲ್ಲಿ ಪ್ರವಾಹ ಬಂದಾಗ ಹೊಳೆಯ ಪಾತ್ರದಲ್ಲಿ ಹಾಯ್ದು ಕಣಿವೆಯೊಳಗೆ ಹೋಗಲು ಸಾಧ್ಯವಿಲ್ಲ. ಕುರಿಗಳನ್ನು ಕಾಯುವ ಹುಡುಗರು ಹೊರತಾಗಿ ಇತರ ಜನರ ಸಂಛಾರವೇ ಇಲ್ಲ. ಇಂತಹ ನಿರ್ಮಾನುಷವಾದ ಅಡವಿಯ ಗೊಂದಿಯೊಂದರಲ್ಲಿ ಪ್ರಾಚೀನ ಭಾರತೀಯ ಕಲೆಗೆ ಕೇಂದ್ರವಾದ ಅಜಂತವು ಅಡಗಿಕೊಂಡಿದೆ. ಈ ಸ್ಥಳದಲ್ಲಿ ದೇವನಿರ್ಮಿತವಾದ ಪ್ರಕೃತಿ

ಸೌಂದರ್ಯಕ್ಕೂ ಮನುಷ್ಯ ನಿರ್ಮಿತವಾದ ಕಲಾಸೌಂದರ್ಯಕ್ಕೂ ಸ್ಪರ್ಧೆಯು ನಡೆದಂತೆ ತೋರುತ್ತದೆ.

ಈ ಗುಡ್ಡಗಳಿಗೆ ಈಶಾನ್ಯದಲ್ಲಿ ಸುಮಾರು ಒಂದೂವರೆಸಾವಿ ವರುಷಗಳ ಕೆಳಗೆ ವಿದರ್ಭ ರಾಜ್ಯಕ್ಕೆ ಸೇರಿದ ಇಂದುಕಾಂತ ವೆಂಬ ಪಟ್ಟಣವೊಂದು ಇದ್ದಿತೆಂದು ಚರಿತ್ರಕಾರರು ಹೇಳ ತ್ತಾರೆ. ಈ ಇಂದುಕಾಂತಕ್ಕೆ ಉತ್ತರ ಮತ್ತು ಪಶ್ಚಿಮ ದೇಶ ಗಳಿಂದ ಬೌದ್ಧಮತವು ಬರಲು, ವಿರಕ್ತಜನರು ಬೌದ್ಧಸಂನ್ಯಾಸಿ ಗಳಾಗಿ ಮನಸ್ಸನ್ನು ಲೌಕಿಕವೃತ್ತಿಗೆ ಆಕರ್ಷಿಸುವ ನಗರವಾಸ ವನ್ನು ಬಿಟ್ಟು ಮನಶ್ಶಾಂತಿಗೂ ತಪಸ್ಸಿಗೂ ಅನುಕೂಲಿಸುವಂತೆ ಕೆಲವು ಮೈಲಿ ದೂರದಲ್ಲಿದ್ದ ಬೆಟ್ಟಗುಡ್ಡಗಳನ್ನು ಸೇರಿದರು. ಇವರ ವಾಸಕ್ಕೆ ವಾಘೋರೆಯ ನಿರ್ಜನವಾದ ಕಣಿವೆಯಲ್ಲಿ, ಸುಂದರವಾದ ಶಾಂತವಾದ ಸನ್ನಿವೇಶದಲ್ಲಿ, ಹಲಕೆಲವು ಗುಹೆ ಗಳು ದೊರೆತಂತೆ ಕಾಣುತ್ತದೆ. ಇವುಗಳಲ್ಲಿ ವಾಸಮಾಡುತ್ತಿದ್ದ ಸಂನ್ಯಾಸಿಗಳು ಆವಶ್ಯಕವಾದಾಗ ಇಂದುಕಾಂತಕ್ಕೂ, ಇತರ ಸುತ್ತುಮುತ್ತಲಿನ ಗ್ರಾಮಗಳಿಗೂ ಹೋಗಿ ಭಿಕ್ಷಾಟನೆ ಮಾಡಿ ಬರುತ್ತಲೂ, ಮಿಕ್ಕ ಕಾಲದಲ್ಲಿ ತಮ್ಮ ಕಣಿವೆಯಲ್ಲೇ ಮೋಕ್ಷ ಸಾಧನೆಗಾಗಿ ವಿದ್ಯಾಭ್ಯಾಸ ಮತ್ತು ತಪಸ್ಸುಗಳನ್ನು ಮಾಡು ತ್ತಲೂ ಇದ್ದರು. ಇವರ ದರ್ಶನಾರ್ಥವಾಗಿ ಗೃಹಸ್ಥರೇ ಮೊದ ಲಾದ ಸಾಮಾನ್ಯ ಜನರು ಕಣಿವೆಗೆ ಬಂದು ಭಿಕ್ಷೆಯನ್ನೂ ಇತರ ಸೌಲಭ್ಯಗಳನ್ನೂ ಸಂನ್ಯಾಸಿಗಳಿಗೆ ನೀಡಿ ಹೋಗುತ್ತಿ ದ್ದರು. ಕಾಲಕ್ರಮದಲ್ಲಿ ಸಂನ್ಯಾಸಿಗಳ ಸಂಖ್ಯೆಯು ಹೆಚ್ಚುತ್ತ ಬರಲು ಸ್ಥಳಸಂಕೋಚವನ್ನು ತಪ್ಪಿಸುವ ಉದ್ದೇಶದಿಂದ ಭಕ್ತಾ ದಿಗಳು ಆ ಸ್ವಾಭಾವಿಕ ಗವಿಗಳನ್ನು ಆಳವಾಗಿಯೂ ಅಗಲ ವಾಗಿಯೂ ಕೊರೆದು ವಿಸ್ತರಿಸುತ್ತಲೂ ಅವುಗಳ ಪಕ್ಕಗಳಲ್ಲಿ



ವಾಘೋರ ನದಿ

By courtesy of the Archæological Dept. of
H. E. H. the Nizam's Govt.

ಹೊಸ ಗವಿಗಳನ್ನು ಕೊರೆಸುತ್ತಲೂ ಬಂದರು. ಹೀಗೆ ಮೊದ
ಮೊದಲು ಕಡೆದ ಗವಿಗಳು ಗುಹೆಗಳ ಸಾಲಿನ ಮಧ್ಯಭಾಗದಲ್ಲಿ
ರುವ, ಒಂಭತ್ತರಿಂದ ಹದಿಮೂರರ ತನಕ ಸಂಖ್ಯೆಯುಳ್ಳ,
ಸಣ್ಣಗವಿಗಳೆಂದು ಊಹಿಸಲ್ಪಟ್ಟಿದೆ. ಇವುಗಳೂ ಯತಿಭರಿತ
ವಾದ ಮೇಲೆ ಅದೇ ಸಾಲಿನಲ್ಲಿ ಇವುಗಳ ಎಡಭಾಗಕ್ಕೂ,
ತರುವಾಯ ಇವುಗಳ ಬಲಭಾಗಕ್ಕೂ ಹೊಸಗವಿಗಳು ಕೊರೆಯ
ಲ್ಪಟ್ಟವು. ಹೀಗೆ ಅಜಂತದಲ್ಲಿ ೨೯ ಗವಿಗಳು ಕೊರೆಯಲ್ಪಟ್ಟಿವೆ.

ವಾಘೋರಹೊಳೆಯು ಗುಡ್ಡದಿಂದ ಏಳು ಮೆಟ್ಟಲುಗಳಲ್ಲಿ
ಧುಮುಕಿ ಸುತ್ತಿಸುತ್ತಿ ಕಣಿವೆಯಲ್ಲಿ ಮೊದಲು ಪಶ್ಚಿಮಕ್ಕೆ
ಹೊರಟು ತರುವಾಯ ಉತ್ತರಕ್ಕೂ ಪೂರ್ವಕ್ಕೂ ತಿರುಗಿದೆ.
ಇದರ ಎಡಗಡೆಯ ದಡದಲ್ಲಿ ಕುದುರೆಯ ಲಾಳದಂತೆ ಸುತ್ತಿರುವ
ಬೆಟ್ಟವೊಂದು ಗೋಡೆಯಂತೆ ಕಡಿದಾಗಿ ಸುಮಾರು ೨೫೦ ಅಡಿ
ಗಳ ಎತ್ತರ ಎದ್ದಿದೆ. ಈ ಬೆಟ್ಟವು ಒಂದೇ ಬಂಡೆಯಿಂದಾಗಿದೆ.
ಇದರ ಮುಖದಲ್ಲಿ ಸುಮಾರು ಅರ್ಧ ಎತ್ತರದಲ್ಲಿ ಬಂಡೆಗಳ ಮೇಲೆ
ನಡೆದುಬಂದ ಕಾಲಾಳುಗಳಿಗೂ, ಆಡುಗಳಿಗೂ ಮಾತ್ರ ಉಪ
ಯೋಗಿಸಲು ಸಾಧ್ಯವಾದ ಕಿರಿದಾದ ಕಾಲುದಾರಿಯೊಂದು ಕಣಿ
ವೆಯೊಳಗೆ ಸುತ್ತಿಕೊಂಡು ಹೋಗುತ್ತಿತ್ತು. ಈ ದಾರಿಯ ಪಕ್ಕ
ದಲ್ಲೇ ಸಾಲುಗವಿಗಳನ್ನು ಕೊರೆದಿರುವುದು. ಇವುಗಳಿಗೆ
ಮುಂದುಗಡೆಯಿಂದ ಮಾತ್ರ ಬೆಳಕು ಬರುವುದರಿಂದ ಹೊರಗಣ
ಬಿಸಿಲಿನಿಂದ ಒಳಕ್ಕೆ ಬರುವವರಿಗೆ ಗುಹೆಗಳು ಮೊದಲು ಮೊದಲು
ಕತ್ತಲಾಗಿ ಕಾಣುವುವು ; ಕ್ರಮೇಣ ಅಲ್ಲಿರುವ ಪದಾರ್ಥಗಳು
ಗೋಚರವಾಗುತ್ತವೆ. ತಾಳ್ಮೆಯಿಂದ ಚೆನ್ನಾಗಿ ಪರಿಶೀಲನೆ
ಮಾಡುವವರಿಗೆ ಅಲ್ಲಿಯ ಕಂಬಗಳು, ಗೋಡೆಗಳು, ಬಾಗಿಲು
ಗಳು ಮೊದಲಾದೆಡೆಗಳಲ್ಲಿ ಕೊರೆದಿರುವ ಶಿಲ್ಪದ ಸೌಂದರ್ಯವೂ,

ಗೋಡೆಗಳ ಮೇಲೂ ಚಾವಣಿಯಮೇಲೂ ಬರೆದಿರುವ ಚಿತ್ರಗಳ ಅಮೋಘವಾದ ರಮ್ಯತೆಯೂ ವ್ಯಕ್ತವಾಗುತ್ತವೆ.

ದಖನ್ನಿನಲ್ಲಿ ಗುಹಾಶಿಲ್ಪದ ಕಾಲವೆಂದರೆ ಕ್ರಿ.ಪೂ. ಸುಮಾರು ಇನ್ನೂರರಿಂದ ಕ್ರಿ.ಶ. ಸುಮಾರು ಎಂಟುನೂರರ ವರೆಗೆ ಒಂದು ಸಾವಿರ ವರುಷಗಳ ಕಾಲವೆಂದು ಹೇಳಬಹುದು. ಇವುಗಳನ್ನು ಬೌದ್ಧ, ಜೈನ, ಶೈವ, ವೈಷ್ಣವ ಮೊದಲಾಗಿ ಎಲ್ಲಾ ಮತಸ್ಥರೂ ತಮ್ಮ ತಮ್ಮ ಧಾರ್ಮಿಕ ಉಪಯೋಗಕ್ಕಾಗಿ ಕೊರೆಯಿಸಿದರು. ಇಂತಹ ಗವಿಗಳ ಸಾಲುಗಳು ಗ್ವಾಲಿಯರಿನ ಬಾಗ್, ಇಂದೋರಿನ ಉದಯಗಿರಿ, ಓಢ್ರದ ಉದಯಗಿರಿ, ಮುಂಬಯಿ ಪ್ರಾಂತ್ಯದ ಕನ್ಹೇರಿ, ಕಾರ್ಲಾ, ಭಾಜ, ನಾಸಿಕ, ಎಲಿಫೇಂಟ, ನಾನಾಘಾಟ್, ಬಾದಾಮಿ ಮೊದಲಾದ ಎಡೆಗಳಲ್ಲಿಯೂ, ನೈಜಾಮಿರಾಜ್ಯದ ಪೀತಲಖೋರ, ಎಲ್ಲೋರ, ಅಜಂತಗಳಲ್ಲಿಯೂ ಕಾಣಬಂದಿವೆ. ಇವುಗಳಲ್ಲಿ ಬೌದ್ಧ ಗವಿಗಳೇ ಬಹಳ ಪ್ರಾಚೀನವಾದವುಗಳೆಂದು ಊಹಿಸಲ್ಪಟ್ಟಿವೆ. ಈ ಗವಿಗಳ ಶಿಲ್ಪವು ಕೂಡ ಕಾಲಕ್ರಮದಲ್ಲಿ ರೂಪಾಂತರಗಳನ್ನು ಹೊಂದುತ್ತಾ ಬಂದಿತು. ಈ ಮಾರ್ಪಾಟುಗಳು ಸಹಜವಾಗಿ ಬೌದ್ಧ ಮತ ತತ್ವಗಳು ಮತ್ತು ಪದ್ಧತಿಗಳು—ಇವುಗಳ ಪ್ರಗತಿಯನ್ನು ಅನುಸರಿಸಿದುವು. ಬೌದ್ಧರು ಮೊದಲು ಮೂರ್ತಿರಹಿತವಾದ ಬುದ್ಧನ ಪೀಠಕ್ಕೂ ಪಾದುಕೆಗಳಿಗೂ, ತರುವಾಯ ಬೌದ್ಧ ಮಹಾಪುರುಷರ ಅಸ್ಥಿ ಭಸ್ಮಾದಿಧಾತುಗಳ ಮೇಲೆ ಕಟ್ಟಿದ ಸ್ತೂಪಗಳೆಂಬ ಬೃಂದಾವನಗಳಿಗೂ ಪೂಜೆ ಸಲ್ಲಿಸುತ್ತಿದ್ದರು. ಆ ಬಳಿಕ, ದೊಡ್ಡ ಚೈತ್ಯಗಳೊಳಗೆ ಸ್ಥಾಪಿಸಲ್ಪಟ್ಟ ಈ ಸ್ತೂಪಗಳ ಮುಂಭಾಗದಲ್ಲಿ ಬುದ್ಧನ ಮೂರ್ತಿಯನ್ನು ಕೊರೆದೂ, ಕಡೆಗೆ ಸಂನ್ಯಾಸಿಗಳು ವಾಸಮಾಡುವ ಸಣ್ಣ ಸಣ್ಣ ಕೊಟಡಿಗಳಿಂದ ಸುತ್ತುವರಿ

ಯಲ್ಪಟ್ಟ ಶಾಲೆಗಳ ಅಥವಾ ಸಭಾಮಂದಿರಗಳ ಹಿಂಭಾಗದಲ್ಲಿ ಗರ್ಭಾಂಕಣದ ಮಧ್ಯದಲ್ಲಿ ಪದ್ಮಾಸನಾರೂಢನಾದ ಬುದ್ಧನ ಮೂರ್ತಿಯನ್ನು ಪ್ರತಿಷ್ಠಿಸಿಯೂ ಪೂಜೆಯನ್ನು ಮಾಡುತ್ತ ಬಂದರು. ಮೊದಲು ಮೊದಲಿನ ಗವಿಗಳು ಕಲಾರಹಿತವಾಗಿದ್ದುವು; ತರುವಾಯ ಚಿತ್ರಾಲಂಕೃತಗಳಾದುವು; ಬರಬರುತ್ತ ಚಿತ್ರಗಳಿಗೆ ಬದಲಾಗಿ ಕಲ್ಲಿನಲ್ಲಿ ಕೊರೆದ ಅಲಂಕಾರಗಳಿಂದಲೂ ಪ್ರತಿಮೆಗಳಿಂದಲೂ ತುಂಬುತ್ತ ಬಂದುವು. ಅಜಂತದ ಗವಿಗಳಲ್ಲಿ ಈ ಪ್ರಗತಿಯನ್ನು ವಿಶದವಾಗಿ ನೋಡಬಹುದು.

ಅಜಂತದಲ್ಲಿರುವ ಎಲ್ಲ ಗವಿಗಳ ಗೋಡೆಗಳ ಮೇಲೂ ಮೊದಲಲ್ಲಿ ಚಿತ್ರಗಳನ್ನು ಬರೆದಿದ್ದರೆಂದು ಹೇಳಬಹುದು. ಆದರೆ ಈಗ ಆರು ಗವಿಗಳಲ್ಲಿ ಮಾತ್ರ ಅವು ಉಳಿದಿವೆ: ಬಲದಿಂದ ಎಡಕ್ಕೆ, ೧, ೨, ೯, ೧೦, ೧೬, ೧೭ನೆಯ ಗುಹೆಗಳು ಇವುಗಳಲ್ಲಿ ಕೆಲವು ೮೦ ಅಡಿ ಚೌಕವಿರುವುದರಿಂದ ಇವುಗಳ ಗೋಡೆಗಳ ಮೇಲೂ, ಚಾವಣಿಗಳ ಮೇಲೂ, ಕಂಬಗಳ ಮೇಲೂ ಬರೆದಿರುವ ಚಿತ್ರಗಳು ಅನೇಕವಾಗಿವೆ. ಈ ಚಿತ್ರಗಳು ಬೇರೆ ಬೇರೆ ಕಾಲದವು. ಇವುಗಳ ಕಾಲವನ್ನು ಈ ಕೆಳಗೆ ಕೊಟ್ಟಿರುವಂತೆ ಗೊತ್ತುಮಾಡಿದ್ದಾರೆ:

೯-೧೦ ನೆಯ ಗವಿಗಳು—ಸುಮಾರು ಕ್ರಿ. ಪೂ. ೧೦೦
೧೦ನೆಯ ಗವಿಯ ಕಂಬಗಳು—ಸುಮಾರು ಕ್ರಿ.ಶ. ೩೫೦
೧೬-೧೭ನೆಯ ಗವಿಗಳು— ಸುಮಾರು ಕ್ರಿ.ಶ. ೪೦೦-೫೦೦
೧-೨ನೆಯ ಗವಿಗಳು— ಸುಮಾರು ಕ್ರಿ.ಶ. ೬೨೬-೬೨೮

ಈ ಚಿತ್ರಗಳಲ್ಲಿ ಕಾಣಬರುವ ವಿಷಯಗಳಲ್ಲಿ ಕೆಲವು ಸ್ವಾಭಾವಿಕವಾದುವು ಅಥವಾ ಅಲಂಕಾರಾರ್ಥವಾದುವು. ಇನ್ನು

ಕೆಲವು ಆಗಿನ ಕಾಲದಲ್ಲಿ ನಡೆದ ಚರಿತ್ರಾರ್ಹವಾದ ಮುಖ್ಯ ವಿಷಯಗಳು. ಆದರೆ ಹೆಚ್ಚುಭಾಗ ಬೌದ್ಧ ಪುರಾಣಗಳಲ್ಲಿ ಕಾಣ ಬರುವ ಬುದ್ಧನ ಜೀವನಚರಿತ್ರೆಯು ಮತ್ತು ಅವನ ಪೂರ್ವ ಜನ್ಮದ ಕಥೆಗಳು; ಇವುಗಳನ್ನು ಜಾತಕಕಥೆಗಳೆಂದು ಕರೆಯು ವರು. ಈ ಚಿತ್ರಗಳಲ್ಲಿ ಅತ್ಯಂತ ಪ್ರಾಚೀನವಾದುವು ಕೂಡ ಭಾರತೀಯ ಚಿತ್ರಗಾರರ ಕೈವಾಡವು ಉತ್ಕೃಷ್ಟಸ್ಥಿತಿಗೆ ಬಂದಿ ತ್ತೆಂಬುದನ್ನು ಸೂಚಿಸುತ್ತವೆ. ಒಂಭತ್ತು ಮತ್ತು ಹತ್ತನೆಯ ಗವಿ ಗಳಲ್ಲಿಯ ಚಿತ್ರಗಳು ಶಾತವಾಹನರಾಜರು ದಕ್ಷಿಣದೇಶವನ್ನು ಆಳು ತ್ತಿದ್ದ ಕಾಲದಲ್ಲಿ ಬೌದ್ಧ ಮತಸ್ಥರಿಂದಲೇ ಬರೆಯಲ್ಪಟ್ಟಿರಬೇಕು. ಕಡೆಕಡೆಯ ಚಿತ್ರಗಳು ಅಂದರೆ ಒಂದು ಮತ್ತು ಎರಡನೆಯ ಗವಿ ಗಳಲ್ಲಿರುವುವು. ಚಾಲುಕ್ಯರಾಜರ ಕಾಲದಲ್ಲಿ ರಾಜರ ಪೋಷಣೆ ಯಲ್ಲೇ ಬರೆಯಲ್ಪಟ್ಟವಾಗಿರಬೇಕು. ಅಂತೂ ಚಿತ್ರಗಳನ್ನು ಬರೆದವರು ಯತಿಗಳೇ ಆದರೂ ಇವರಿಗೆ ರಾಜರ ಮತ್ತು ಪ್ರಜೆ ಗಳ ಲೌಕಿಕ ಜೀವನ ರಹಸ್ಯಗಳು ಚೆನ್ನಾಗಿ ತಿಳಿದಿತ್ತು ಎಂಬು ದನ್ನು ಇವರ ಚಿತ್ರಗಳು ಸ್ಪಷ್ಟಪಡಿಸುತ್ತವೆ.

ಅಜಂತದ ಚಿತ್ರಗಾರರು ಕಲ್ಲಿನ ಗೋಡೆಯಮೇಲೆ ಬೆಳ್ಳಿಯ ಪಾವಲಿಯಷ್ಟು ದಂದವಾದ ಸುಣ್ಣದ ಗಚ್ಚನ್ನು ಬಳಿದು ನಯ ಮಾಡಿ ಈ ಗಚ್ಚು ನೀರಿನಲ್ಲಿ ನೆನೆದಿರುವಾಗ ಅದರ ಮೇಲೆ ಕುಂಚ ದಿಂದ ಕೆಂಪುಬಣ್ಣದಲ್ಲಿ ಸುತ್ತುಗೆರೆಗಳನ್ನು ಹಾಕಿ ತರುವಾಯ ಚಿತ್ರದ ಆಯಾ ಭಾಗಕ್ಕೆ ನೀರಿನ ಬಣ್ಣಗಳನ್ನು ಬಳಿಯುತ್ತಿದ್ದರು. ಒಂದು ಸಲ ಬಳಿದ ಬಣ್ಣಗಳನ್ನು ಆಮೇಲೆ ಅಳಿಸುವುದಕ್ಕೆ ಅವಕಾಶವು ಕಡಿಮೆಯಾದುದರಿಂದ ಚಿತ್ರಗಳನ್ನು ಸಂಪೂರ್ಣ ವಾಗಿ ಮನಸ್ಸಿನಲ್ಲಿ ಮೊದಲು ಕುರಿತು ತಪ್ಪುಗಳಾಗದಂತೆ ಧೈರ್ಯವಾಗಿ ಚಿತ್ರಗಳನ್ನು ಬರೆದರು. ಅಜಂತದ ಚಿತ್ರಗಳಲ್ಲಿ

ಒಂದೊಂದು ವ್ಯಕ್ತಿಚಿತ್ರವೂ ಹಸ್ತಮುದ್ರಿಕಾದಿಗಳಿಂದ ಭಾವ ನಿರೂಪಣವನ್ನು ಮಾಡುವುದು. ಈ ವ್ಯಕ್ತಿಗಳನ್ನು ಒಟ್ಟುಗೂಡಿ ಸುವ ಕೆಲಸವು ಬಹಳ ಕೌಶಲದಿಂದ ನಡೆದಿದೆ; ಒಂದೊಂದು ವ್ಯಕ್ತಿಯೂ ಸ್ವಭಾವಸುಂದರವಾಗಿ ಕಾಣುವುದಲ್ಲದೆ ಒಟ್ಟು ಚಿತ್ರದ ರಸಭಾವಗಳೂ ಸ್ಪಷ್ಟವಾಗಿ ಪ್ರಕಟವಾಗುವುವು. ಮೊಟ್ಟ ಮೊದಲು ನೋಡುವವರಿಗೆ ಒಂದೊಂದು ಚಿತ್ರದಲ್ಲೂ ವ್ಯಕ್ತಿಸಂ ಖ್ಯೆಯು ಅತ್ಯಧಿಕವಾಗಿರುವಂತೆಯೂ, ಅವುಗಳ ಸಂಯೋಜನವು ಯಾವ ನಿಯಮವನ್ನೇ ಆಗಲಿ, ಪದ್ಧತಿಯನ್ನೇ ಆಗಲಿ ಅನುಸರಿ ಸದಿರುವಂತೆಯೂ ಕಾಣಬರುತ್ತದೆ. ಆದರೆ ನಿಧಾನವಾಗಿ ಪರಿಶೀ ಲನೆ ಮಾಡುತ್ತ ಬಂದಹಾಗೆಲ್ಲ ಅವುಗಳ ಒಗ್ಗಟ್ಟು ಮನಸ್ಸಿಗೆ ಗೋಚರವಾಗುತ್ತದೆ. ಈ ಒಗ್ಗಟ್ಟು ಕೃತಕವಲ್ಲ, ಪ್ರಕೃತಿ ಯನ್ನು ಅನುಕರಿಸುವಂತಹದು. ವಿವಿಧಗಿರಿಗಳೂ, ವೃಕ್ಷಗಳೂ, ಪುಷ್ಪಗಳೂ, ನೆರಳು ಬೆಳಕುಗಳೂ, ನಾನಾಪ್ರಾಣಿಗಳೂ, ತಮ್ಮ ತಮ್ಮಷ್ಟಕ್ಕೆ ತಾವು ಬದುಕಿ ಉಳಿಯುವುದಲ್ಲದೆ ಒಟ್ಟುಗೂಡಿ ಪ್ರಕೃತಿಗೆ ಸೌಂದರ್ಯವನ್ನು ಕೊಟ್ಟಿರುವಂತೆ ಈ ಚಿತ್ರಗಳ ಲ್ಲಿಯೂ ಜೋಡಣೆಯಾಗಿವೆ. ಈ ಪ್ರಕೃತಿಯ ನಡುವೆ ಅದರ ಅತ್ಯಂತ ರಮ್ಯವಾದ ರೂಪವಾಗಿ ಮನುಷ್ಯವ್ಯಕ್ತಿಗಳನ್ನು ಕಾಣಿ ಸಿದೆ. ಜನಜೀವನವು ಪ್ರಕೃತಿಯ ರಮ್ಯತಮವಾದ ಒಂದು ಭಾಗ. ಇಂತಹ ಸಂಯೋಜನವನ್ನು ಅಜಂತದ ಚಿತ್ರಗಾರರು ರಚಿಸುವಾಗ ತಾವು ಮಾಡಿದ ಪ್ರಯತ್ನವು ನಮಗೆ ಕಾಣ ದಂತೆಯೂ, ತಮ್ಮ ಕೌಶಲ್ಯದ ಫಲವು ಮಾತ್ರ ಸ್ವಾಭಾವಿಕವಾಗಿ ತೋರುವಂತೆಯೂ ನಿರ್ಮಿಸಿದ್ದಾರೆ. ಒಂದೊಂದು ವ್ಯಕ್ತಿಯೂ ಲಾಲಿತ್ಯಸೌಂದರ್ಯಭಾವಗಳಿಂದ ಗರ್ಭಿತವಾಗಿದೆ.

ಈ ಚಿತ್ರಗಳಲ್ಲಿ ಕಾಣಿಸುವುದು ಜೀವಜೀವಿಮಯವಾದ

ಪ್ರಪಂಚ, ಬೆಳೆಯುತ್ತಿರುವ ಗಿಡಗಳು, ಅರಳುತ್ತಿರುವ ಕುಸುಮ ಗಳು, ವಿವಿಧಪಕ್ಷಿಗಳು, ಸುಂದರವಾದ ಹುಲ್ಲೆಗಳು, ಗಂಭೀರ ವಾದ ಆನೆಗಳು, ಮನೋಹರವಾದ ಬಣ್ಣಗಳಿಂದ ಅಲಂಕೃತ ವಾದ ಮಂಟಪಗಳು, ಗೃಹಗಳು, ನಗರಗಳ ಮಹಾದ್ವಾರಗಳು, ಅರಮನೆಗಳು, ಇವುಗಳ ಮಧ್ಯೆ ಲಲಿತಕಾಯರಾಗಿ ರಮ್ಯವಾದ ಭಾವಗಳನ್ನು ಸೂಚಿಸುತ್ತ ಸ್ವತಂತ್ರವಾಗಿ ಕ್ರೀಡಿಸುತ್ತಲೋ ಧ್ಯಾನಿಸುತ್ತಲೋ ಇರುವ ಗಂಡಸರು, ಹೆಂಗಸರು, ಮಕ್ಕಳು, ಸುಖದುಃಖಗಳನ್ನು ಅನುಭವಿಸುತ್ತಿರುವ ಜೀವಿಲೋಕ. ಈ ನಿಬಿಡವಾದ ಲೋಕದ ಮಧ್ಯದಲ್ಲಿ ದಯಾಪೂರಿತವಾದ, ಧ್ಯಾನಾಸಕ್ತವಾದ ಮಹಾತ್ಮನಾದ ಬುದ್ಧದೇವನ ಬದುಕು. ಇಂತಹ ದೃಶ್ಯವು ಅಜಂತದ ಚಿತ್ರಗಳಲ್ಲಿ ಪ್ರತ್ಯಕ್ಷವಾಗು ತ್ತದೆ.

ಈ ಚಿತ್ರಗಳ ಪ್ರಧಾನಭಾವವು ವೈರಾಗ್ಯ. ಇದು ಜಗತ್ತಿನ ರಮ್ಯತೆಗೆ ಬೇಸರಗೊಂಡು ಓಡಿಹೋಗತಕ್ಕ ಅಶಕ್ತನ ವೈರಾಗ್ಯ ವಲ್ಲ. ಜಗತ್ತಿನ ರಮ್ಯತೆಯ ಮಧ್ಯದಲ್ಲಿ ಬದುಕಿ ಪ್ರಕೃತಿಯ ಮತ್ತು ಜೀವಿಗಳ ಸುಖದುಃಖಗಳಲ್ಲಿ ಅನಂತವಾದ ಕರುಣೆ ಯಿಂದ ಕೂಡಿ ಸುಂದರನಾದ ರಾಜಕುಮಾರನಾಗಿ ಬೆಳೆದ ಸರ್ವಶಕ್ತಿಯುಕ್ತನಾದ ಮಹಾಪುರುಷನ ವೈರಾಗ್ಯ. ನಿಬಿಡವಾದ ಪ್ರಾಣಿಕೋಟಿಯ ಮಧ್ಯದಲ್ಲಿ ನಿಶ್ಚಲಚಿತ್ತನಾಗಿ ಬದುಕುವ ಮಹಾಪುರುಷನ ವೈರಾಗ್ಯ. ಎಲ್ಲಕ್ಕಿಂತಲೂ ಮೇಲಾಗಿ ಅಜಂ ತದ ಚಿತ್ರಗಳಲ್ಲಿ ಕಾಣಬರುವುದು ಬುದ್ಧದೇವನ ಅಮೋಘ ವಾದ ಆತ್ಮವಿಕಾಸ.

ಅಜಂತದ ಚಿತ್ರಕಲೆಯು ಭಾರತೀಯರ ಹೃದಯದಿಂದ ಜನಿಸಿದುದು; ಭಾರತೀಯರ ಅತಿಶ್ಲಾಘ್ಯವಾದ ಮನೋಭಾವ

ವನ್ನು ನಿರೂಪಿಸುವುದು. ಮನುಷ್ಯರ ಕಲೆಗಳ ಇತಿಹಾಸದಲ್ಲಿ ಇವಕ್ಕೆ ಉನ್ನತಸ್ಥಾನವು ಸಹಜವಾಗಿ ದೊರೆತಿದೆ.

ಮೊದಲನೆಯ ಗವಿಯು ಅಜಂತದ ವಿಹಾರಗಳಲ್ಲಿ ಬಲು ದೊಡ್ಡದಾಗಿಯೂ ಅಲಂಕಾರಪೂರಿತವಾಗಿಯೂ ಇದೆ. ಇದು ಸುಮಾರು ೭ನೆಯ ಶತಮಾನದಲ್ಲಿ ಕೊರೆಯಲ್ಪಟ್ಟಿದು. ಇದರ ಮುಖಮಂಟಪವು ಈಗ ಅದೃಶ್ಯವಾಗಿದೆ; ಇದರ ಹಿಂದಿನ ಭಾಗವಾದ ಆರು ಕಂಬಗಳುಳ್ಳ ಕೈಸಾಲೆ ಉಳಿದಿದೆ. ಕೈಸಾಲೆಯ ಇಕ್ಕಡೆಗಳಲ್ಲೂ ಸಣ್ಣ ಗವಿಗಳನ್ನು ಕೊರೆದಿದೆ. ಒಳಗಿನ ರಂಗ ಶಾಲೆಯು ಅರುವತ್ತನಾಲ್ಕು ಅಡಿ ಚದರವಾಗಿ ಚೌಕೋನ ರೂಪದಲ್ಲಿ ನಿಂತಿರುವ ಇಪ್ಪತ್ತು ಕಂಬಗಳಿಂದ ಕೂಡಿದೆ. ಈ ಶಾಲೆಯ ಎಡಬಲ ಗೋಡೆಗಳಲ್ಲಿ ಐದೈದು ಸಣ್ಣ ಕೊಠಡಿ ಗಳಿವೆ. ಹಿಂದುಗಡೆ ಎರಡು ಕಂಬಗಳುಳ್ಳ ಅಂತರಾಳವೂ, ಅದರ ಪಕ್ಕಗಳಲ್ಲಿ ಎರಡೆರಡು ಕೊಠಡಿಗಳೂ, ಎಲ್ಲಕ್ಕೂ ಹಿಂದೆ ದೊಡ್ಡದೊಂದು ಗರ್ಭಗುಡಿಯೂ ಇವೆ.. ಗವಿಯ ಮುಂಭಾಗ ದಲ್ಲಿ ಕಂಬದ ಮೇಲುಗಡೆ ಸ್ವಾಭಾವಿಕವಾಗಿ ವಿಹರಿಸುವ ಆನೆಗಳೂ, ಬೇಟೆಯಲ್ಲಿ ತೊಡಗಿದ ಗುಂಪುಗಳೂ ಶಿಲ್ಪಿತವಾಗಿವೆ. ಪಶ್ಚಿಮದ ಕೊಠಡಿಯಲ್ಲಿ ಸಿದ್ಧಾರ್ಥನಿಗೆ ಗೋಚರವಾದ ರೋಗ, ಮುಪ್ಪು, ಸಾವು ಎಂಬ ಜೀವನದ ಶೋಚನೀಯ ದೃಶ್ಯಗಳು ಮೊದಲಬಾರಿ ಗೋಚರವಾದುದನ್ನು ಕೊರೆದಿದೆ. ಸಿದ್ಧಾರ್ಥನು ಒಂದುದಿನ ತನ್ನ ರಥದಲ್ಲಿ ಹೊರಟು ಪಟ್ಟಣದ ಬೀದಿಗಳಲ್ಲಿ ಹೋಗುತ್ತಿರುವಾಗ ವೃದ್ಧನೊಬ್ಬನು ಕೋಲನ್ನೂರಿ ಕೊಂಡು ನಿಂತಿದ್ದುದನ್ನೂ, ಅನಂತರ ಹಲವರು ಶವವೊಂದನ್ನು ಹೊತ್ತುಕೊಂಡು ಹೋಗುತ್ತಿರುವಾಗ ಸ್ತ್ರೀಯೊಬ್ಬಳು ದುಃಖಿ ಸುತ್ತಿದ್ದುದನ್ನೂ ನೋಡಿ ರಾಜಕುಮಾರನ ಮನಸ್ಸು ಕರಗಿಹೋ

ಯಿತು. ಈ ದೃಶ್ಯಗಳು ಸಿದ್ಧಾರ್ಥನು ವ್ಯಾಕುಲಪಡುವುದಕ್ಕೆ ಕಾರಣವಾಗಿ ಆತನು ಮುಂದೆ ಬುದ್ಧನಾಗುವುದರ ಸೂಚನೆಗ ಳಾಗಿ ಪರಿಣಮಿಸಿದುವು.

ಈ ದೃಶ್ಯಗಳ ಮೇಲ್ಭಾಗವಲ್ಲಿ ಸಿಂಹಶಿರಸ್ಸುಗಳ ಸಾಲೂ ಅದರಡಿ ಹಂಸಗಳ ಸಾಲೂ ಇವೆ. ಕೈಸಾಲೆಯಿಂದ ರಂಗಶಾಲೆಗೆ ಮೂರು ಬಾಗಿಲುಗಳೂ ಎರಡು ಕಿಟಕಿಗಳೂ ಇವೆ. ಇದರಲ್ಲಿ ಮಧ್ಯದ ಬಾಗಿಲೂ, ರಂಗಶಾಲೆಯ ಹಿಂಭಾಗದ ಕಂಬಗಳೂ, ಬಹಳ ದಟ್ಟವಾದ ಅಲಂಕಾರಗಳೊಡನೆ ರಮ್ಯವಾಗಿ ಕೊರೆಯ ಲ್ಪಟ್ಟಿವೆ. ಗರ್ಭಗುಡಿಯಲ್ಲಿ ಇಂದ್ರನಿಂದ ಸೇವೆಹೊಂದುತ್ತಿರುವ ಬುದ್ಧನ ಮಹಾ ಮೂರ್ತಿಯು ಕುಳಿತಿದೆ. ಬುದ್ಧನು ಒಂದುಸಲ ಪರ್ವತದ ಗುಹೆಯೊಂದರಲ್ಲಿ ಧ್ಯಾನಾಸಕ್ತನಾಗಿ ಕುಳಿತಿರುವಾಗ ಇಂದ್ರನು ಅಲ್ಲಿಗೆ ತನ್ನ ವಿಶಿಷ್ಟವಾದ ಪರಿವಾರದೊಡನೆ ಬಂದು ಬುದ್ಧನಿಗೆ ನಮಸ್ಕಾರಮಾಡಿ ಆತನನ್ನು ಉಪಚರಿಸಿದನು. ಈ ಸನ್ನಿವೇಶವು ಬೌದ್ಧಪ್ರತಿಮಾಶಿಲ್ಪಗಳಲ್ಲಿಯೂ ವರ್ಣಚಿತ್ರಗಳ ಲ್ಲಿಯೂ ಬಹಳ ಮನೋಹರವಾಗಿ ಚಿತ್ರಿಸಲ್ಪಟ್ಟಿರುವುದು.

ಗರ್ಭಗುಡಿಯ ಬಾಗಿಲ ಉಭಯ ಪಾರ್ಶ್ವಗಳಲ್ಲಿ ನಾಗರೂ ಗಂಗಾ ಯಮುನಾದೇವಿಯರೂ ಕಾದಿರುತ್ತಾರೆ.

ಈ ಗವಿಯ ಗೋಡೆಯಷ್ಟೂ ಚಿತ್ರಗಳಿಂದ ಮುಚ್ಚಲ್ಪ ಟ್ಟಿತ್ತು. ಈಗ ಈ ಚಿತ್ರಗಳ ಕೆಳಭಾಗಗಳು ಕೆಟ್ಟುಹೋಗಿವೆ. ಉಳಿದುವುಗಳಲ್ಲಿ ಆಗಿನ ಚಿತ್ರಕಲೆಯ ರಮ್ಯತೆಯನ್ನು ನೋಡ ಬಹುದು. ಮುಂಬಾಗಿಲಿನ ಬಲಪಾರ್ಶ್ವದಲ್ಲಿ ಚಾಲುಕ್ಯ ಚಕ್ರ ವರ್ತಿಯಾದ ಮತ್ತು ಕರ್ನಾಟಕದ ವೀರಾಗ್ರೇಸರನಾದ ಇಮ್ಮಡಿ ಪುಲಿಕೇಶಿಯು ಪಾರ್ಸೀಸ್ಥಾನದ ರಾಯಭಾರಿಗೆ ಒಡ್ಡೋಲಗದಲ್ಲಿ ದರ್ಶನವನ್ನು ಕೊಡುವ ಚಿತ್ರವಿದೆ. ಚಾವಣಿ

ಯಲ್ಲೂ ಸಹ ಮಧ್ಯದಲ್ಲಿ ದೊಡ್ಡದಾದ ಪದ್ಮಾಕಾರವೂ, ಇದರ ಸುತ್ತ ಪಾರ್ಸೀಸ್ಥಾನದ ರಾಜನಾಗಿ ಪುಲಿಕೇಶಿಗೆ ಸ್ನೇಹಿತ ನಾಗಿದ್ದ ಖುಸ್ರು ಮತ್ತು ಅವನ ರಾಣಿಯ ಚಿತ್ರಗಳೂ ಇವೆ. ಆದರೆ ಈ ಗವಿಯ ಚಿತ್ರಗಳಲ್ಲಿ ಅತ್ಯಂತ ಉತ್ತಮವಾದ್ದು ರಂಗಶಾಲೆಯ ಪಶ್ಚಿಮಾರ್ಧದ ಗೋಡೆಯ ಮೇಲೆ ಕಾಣಿಸು ವುವು. ಇವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು.

ಇವುಗಳಲ್ಲಿ ಒಂದಾದ ಶಿಬಿಜಾತಕದ ಕಥೆಯು ಮಹಾ ಭಾರತದ ವನಪರ್ವದಲ್ಲಿ ಉಕ್ತವಾಗಿರುವ ಕಥೆಯನ್ನು ಹೋಲು ವುದು. ಬೋಧಿಸತ್ವನಾದ ಶಿಬಿಯ ಧರ್ಮಪರಾಯಣತೆಯನ್ನು ಪರೀಕ್ಷಿಸಲು ಇಂದ್ರನೂ ಅಗ್ನಿಯೂ ಗಿಡಗ ಮತ್ತು ಪಾರಿವಾಳ ಗಳ ರೂಪವನ್ನು ಹೊಂದುತ್ತಾರೆ. ಗಿಡಗರೂಪದ ಇಂದ್ರನು ಬೆನ್ನಟ್ಟಿ ಬರಲು ಪಾರಿವಾಳರೂಪದ ಅಗ್ನಿ ಶಿಬಿಚಕ್ರವರ್ತಿಯ ಮರೆಹೊಗುವನು. ಆಗ ಗಿಡಗನು ಅಲ್ಲಿಗೆ ಬಂದು ಪಾರಿವಾಳವು ತನ್ನ ನ್ಯಾಯವಾದ ಬೇಟೆಯಾದುದರಿಂದ ಅದನ್ನು ತನಗೆ ಒಪ್ಪಿಸ ಬೇಕೆಂದು ಶಿಬಿಯನ್ನು ಕೇಳುವನು. ಆಗ ಶಿಬಿಯು "ಎಲೈ ಗಿಡಗವೆ, ಭಯಗ್ರಸ್ತವಾಗಿ ಮರೆಹೊಕ್ಕಿರುವ ಪ್ರಾಣಿಯನ್ನು ಯಾವಾತನು ಅದರ ಶತ್ರುವಿಗೆ ಬಿಟ್ಟುಕೊಡುವನೋ ಆತನು ಸದ್ಗತಿಯನ್ನು ಕಾಣಲಾರನು. ಆದ್ದರಿಂದ ಈ ಪಾರಿವಾಳಕ್ಕೆ ಬದಲಾಗಿ ಅಕ್ಕಿಯೊಡನೆ ಪಕ್ವಮಾಡಿದ ಗೂಳಿಯೊಂದನ್ನು ಆಹಾರಾರ್ಥವಾಗಿ ನಿನ್ನ ಮುಂದೆ ಇರಿಸಲಾಗುವುದು" ಎಂದನು. ಆದರೆ ಗಿಡಗವು ಇಂತಹ ಆಹಾರವು ತನಗೆ ಸಹಜವಾದುದಲ್ಲ ವೆಂದು ಹೇಳಲು ಶಿಬಿಯು ಪಾರಿವಾಳವನ್ನು ಬಿಟ್ಟುಕೊಡ ಲಾಗುವುದಿಲ್ಲವೆಂದೂ ಅದಕ್ಕೆ ಬದಲಾಗಿ ತನ್ನ ಕೈಯಲ್ಲಾಗುವ ಇನ್ನೇನನ್ನಾದರೂ ಕೊಡುವೆನೆಂದೂ ಹೇಳಿದನು. ಇದಕ್ಕೆ

ಉತ್ತರವಾಗಿ ಗಿಡಗವು ಪಾರಿವಾಳದ ಮಾಂಸದ ತೂಕಕ್ಕೆ ಸರಿಯಾಗಿ ನಿನ್ನ ದೇಹದಿಂದಲೇ ಮಾಂಸವನ್ನು ಕೊಡೆಂದು ಕೇಳಲು ಶಿಬಿಯು ಸಂತೋಷದಿಂದ ತಕ್ಕಡಿಯನ್ನು ತರಿಸಿ ತನ್ನ ದೇಹದಿಂದ ಮಾಂಸವನ್ನು ಕೊಯ್ಯಲುಪಕ್ರಮಿಸಿದನು. ಆದ ರೇನು! ಎಷ್ಟು ಕೊಯ್ದರೂ ಸಾಕಾಗದೆ ಜೇಸತ್ತು ಕೊನೆಗೆ ತಾನೇ ತಕ್ಕಡಿಯನ್ನು ಪ್ರವೇಶಿಸಲು ಇಂದ್ರಾಗ್ನಿಗಳು ಪ್ರತ್ಯಕ್ಷ ರಾಗಿ ಶಿಬಿಯ ಧರ್ಮಪರಾಯಣತೆಯನ್ನು ಕೊಂಡಾಡಿ ಈತನು ಸರ್ವಕಾಲದಲ್ಲೂ ಪ್ರಪಂಚದಲ್ಲಿ ಕೀರ್ತಿವಂತನಾಗುವನೆಂದು ಹರಸಿದರು. ಅಜಂತದಲ್ಲಿ ಬರೆಯಲ್ಪಟ್ಟಿರುವ ಈ ಚಿತ್ರದಲ್ಲಿ ಶಿಬಿರಾಜನು ತನ್ನ ಮರೆಹೊಕ್ಕ ಪಾರಿವಾಳವನ್ನು ಕಾಪಾಡಲು ತನ್ನ ಮೈಯ ಮಾಂಸದ ತುಂಡನ್ನು ಕೊಯ್ದು ಕೊಡುವುದೂ ನೆರೆದಿದ್ದ ಬ್ರಾಹ್ಮಣರೂ ಯತಿಗಳೂ ದುಃಖದಿಂದ ಈತನ ಆತ್ಮ ತ್ಯಾಗವನ್ನು ನೋಡುತ್ತಿರುವುದೂ ಮನಸ್ಸನ್ನು ಕರಗಿಸುತ್ತವೆ.

ಇನ್ನೊಂದಾದ ಮಹಾಜನಕ ಜಾತಕದಲ್ಲಿ ಕಾರಣವಿಲ್ಲದ ಅಸೂಯೆಯ ಫಲವಾಗಿ ರಾಜಕುಮಾರನೊಬ್ಬನು ತನ್ನ ಸಹೋದರನಿಂದ ಕೊಲ್ಲಲ್ಪಡುವನು. ಗರ್ಭಿಣಿಯಾಗಿದ್ದ ರಾಜನ ಪತ್ನಿಯು ಈ ಸಂದರ್ಭದಲ್ಲಿ ದೇಶವನ್ನು ಬಿಟ್ಟು ಹೋಗುವಳು. ಇವಳಲ್ಲಿ ಹುಟ್ಟಿದ ರಾಜಕುಮಾರನು ತಂದೆಯ ಅರಿವಿಲ್ಲದೆ ಕೆಲವು ಕಾಲ ಬೆಳೆದು ಅನಂತರ ನಿಜಸಂಗತಿಯನ್ನು ತಿಳಿಯು ವನು. ಆಗ ವರ್ತಕನಂತೆ ವೇಷತಾಳಿ ಸಮುದ್ರ ಪ್ರಯಾಣ ಮಾಡುತ್ತಿರುವಲ್ಲಿ ಹಡಗು ಮುಳುಗಿಹೋಗಲು ಈತನನ್ನು ಒಬ್ಬ ದೇವತಾಸ್ತ್ರೀಯು ಇವನ ತಂದೆಯ ರಾಜ್ಯಕ್ಕೆ ಕರೆದೊ ಯ್ಯುವಳು. ರಾಜಾಸ್ಥಾನದಲ್ಲಿ ಕೇಳಿದ ಕಷ್ಟತರವಾದ ಪ್ರಶ್ನೆ ಗಳಿಗೆ ಈತನು ಸರಿಯಾದ ಉತ್ತರವನ್ನಿತ್ತು ರಾಜ್ಯಾಪಹಾರಿಯ

ಮಗಳನ್ನು ಮದುವೆಯಾಗುವನು. ಕಾಲಕ್ರಮದಲ್ಲಿ ಈತನು ಸಂನ್ಯಾಸಿಯಾಗಲು ಇವನ ಹೆಂಡತಿಯೂ ಇವನನ್ನು ಅನುಸರಿಸುವಳು. ಈ ಚಿತ್ರದಲ್ಲಿ ರಾಜನೂ ಓಲಗದ ಜನರೂ ನರ್ತಕಿಯ ಹಾವಭಾಗಳನ್ನು ದೃಷ್ಟಿಸಿ ನೋಡುತ್ತಿರುವುದೂ ಕಡೆಗೆ ರಾಜನು ರಾಜ್ಯತ್ಯಾಗ ಮಾಡಿದಾಗ ರಾಣಿವಾಸದವರ ವಿಸ್ಮಯವೂ ಚಿತ್ರಿತವಾಗಿವೆ.

ಉತ್ತರದ ಗೋಡೆಯ ಮೇಲಿರುವ ಬೋಧಿಸತ್ವ ಪದ್ಮಪಾಣಿಯ ಚಿತ್ರವು ಈ ಜಗತ್ತಿನ ಚಿತ್ರಗಳಲ್ಲೆಲ್ಲ ಅತ್ಯಂತ ಉತ್ತಮವಾದುದೆಂದು ಪ್ರಸಿದ್ಧವಾಗಿದೆ. ಇದರಲ್ಲಿ ಕಾಣಿಸುವುದು ಪದ್ಮಪಾಣಿಯ ಮದುವೆಯ ಮೆರವಣಿಗೆ. ಉಪ್ಪರಿಗೆಗಳಲ್ಲಿ ಗೃಹಸ್ಥರು ಕೌತುಕದಿಂದ ನೋಡುತ್ತಲೂ, ಗಿಡಗಳಮೇಲೆ ಪಕ್ಷಿಗಳೂ ಕಪಿಗಳೂ ವಿಹರಿಸುತ್ತಲೂ ಇರುವಲ್ಲಿ, ಜನಸಂದಣಿಯ ಮಧ್ಯದಲ್ಲಿ ಮದುವೆಯ ಮೆರವಣಿಗೆಯು ಮುನ್ನಡೆಯುತ್ತಿರುವುದು. ಇದರ ಮಧ್ಯೆ ಬಲಗಡೆ ಪರಾಕು ಹೇಳುವ ಸೇವಕರಿಂದಲೂ, ಎಡಗಡೆ ಲಲಿತಗಾತ್ರಳಾಗಿ ಅಲಂಕಾರಗಳಿಂದ ರಮ್ಯಳಾದ ಕೃಷ್ಣವರ್ಣದ ಮದವಣಗಿತ್ತಿಯಿಂದಲೂ ಕೂಡಿದ ರಾಜಕುಮಾರನಾದ ಪದ್ಮಪಾಣಿಯು ನಿಂತಿರುವನು. ಸುಂದರವೂ ಪ್ರತಿಭಾಯುಕ್ತವೂ ಆದ ಮುಖ, ವಿಶಾಲವಾದ ವಕ್ಷಸ್ಸು, ಬಲವಾದ ಭುಜಗಳು, ದುಂಡಾದ ಕುತ್ತಿಗೆ, ಮುಕ್ತಾಫಲಸದೃಶವಾದ ದೇಹಕಾಂತಿ, ದೀರ್ಘವಾದ ಕಪ್ಪು ಕೂದಲು, ಕಿರೀಟ, ಕಂಠಿ ಮೊದಲಾದ ಆಭರಣಗಳು—ಇವುಗಳಿಂದ ಶೋಭಾಯಮಾನನಾಗಿ ಪದ್ಮಪಾಣಿಯು ಬರುತ್ತಿರುವನು. ಆದರೆ ಅವನ ಮುಖದಲ್ಲಿ ನಗುವಿಲ್ಲ. ಕೈಯಲ್ಲಿ ಬಿಳಿಯ ಪದ್ಮವೊಂದನ್ನು ಹಿಡಿದು, ಅರೆಗಣ್ಣು ಮುಚ್ಚಿ ಚಿಂತಿಸು

ತ್ತಿರುವನು. ವಿವಿಧ ಜೀವನದಿಂದ ತುಮುಲವಾದ ಜಗತ್ತಿನಲ್ಲಿ ಈ ಮಹಾನುಭಾವನ ಆತ್ಮವು ಆಲೋಚಿಸುತ್ತ ಜಗತ್ತಿನ ವೇದನೆಗೆ ಪರಿಹಾರವನ್ನು ಹುಡುಕುತ್ತಿರುವುದು. ಮಮಕಾರ ದಲ್ಲಿಯೂ ಸ್ವಸುಖದಲ್ಲಿಯೂ ತೃಪ್ತಿಪಡದೆ ಲೋಕಹಿತಕ್ಕಾಗಿ ತಪಿಸುತ್ತಿರುವ ಈ ಮಹಾನುಭಾವನ ಆತ್ಮವು ಬೌದ್ಧಮತಕ್ಕೆ ಹೃದಯರೂಪವಾಗಿ ಅದರ ತತ್ವಗಳನ್ನು ಬೀರುತ್ತದೆ.

ಅಂತರಾಳದ ಪಶ್ಚಿಮ ಗೋಡೆಯ ಮೇಲೆ ಬುದ್ಧನು ತನ್ನ ತಪಸ್ಸಿಗೆ ಭಂಗತರಲು ಯತ್ನಿಸುತ್ತಿದ್ದ ಮಾರನ ಪುತ್ರಿಯರ ಮನೋಮೋಹಕವಾದ ನರ್ತನಾದಿ ಆಕರ್ಷಣೆಗಳಿಗೆ ಸಿಕ್ಕದೆ, ಮಾರನನ್ನು ಗೆದ್ದ ಕಥೆಯನ್ನು ಭಾವಯುಕ್ತವಾಗಿ ತೋರ್ಪಡಿ ಸಿದೆ. ಗೌತಮಬುದ್ಧನು ತಪಸ್ಸನ್ನಾಚರಿಸುತ್ತಿರುವಾಗ ಇವ ನನ್ನು ವ್ಯಾಮೋಹದಲ್ಲಿ ಕಟ್ಟಿ ಇವನ ತಪೋಭಂಗಮಾಡಲು ಮೋಹಕ್ಕೆ ಅಧಿದೇವತೆಯಾದ ಮಾರನು ತನ್ನ ಸುಂದರಿಯ ರಾದ ಪುತ್ರಿಯರನ್ನು ಕಳುಹಿಸುವುದೂ ಅವರು ಬುದ್ಧನ ಮನಸ್ಸನ್ನು ಕೆಡಿಸಲು ತಮ್ಮ ಹಾವಭಾವ ವಿಲಾಸಗಳಿಂದಲೂ ವಿವಿಧ ನರ್ತನಗಳಿಂದಲೂ ಯತ್ನಿಸುವುದೂ ಇದರಲ್ಲಿವೆ. ಆದರೆ ಬುದ್ಧನು ಮಾತ್ರ ಬಹಿರ್ಮುಖನಾಗಲಿಲ್ಲ. ಅನಂತರ ಮಾರನು ತನ್ನ ಸೈನ್ಯಸಮೇತನಾಗಿ ಬಂದು ಬುದ್ಧನನ್ನು ನಾನಾವಿಧವಾಗಿ ಪೀಡಿಸಲು ಯತ್ನಿಸುವನು. ಆದರೂ ಕೊನೆಗೆ ತಾನೇ ಸೋತು ಹೋಗುವನು.

ಮಾರನ ಸೋಲಲ್ಲದೆ ಈ ಮೊದಲನೆಯ ಗವಿಯಲ್ಲಿ ಬುದ್ಧನ ನಾನಾ ರೂಪಗಳೂ, ವಜ್ರಪಾಣಿ, ಚಂಪೆಯಜಾತಕ ಮೊದ ಲಾದ ಚಿತ್ರಗಳೂ ಕಾಣಬರುತ್ತವೆ.

ಎರಡನೆಯ ಗವಿಯು ೪೮ ಅಡಿ ಚದರವುಳ್ಳ ವಿಹಾರ.

ಇದರ ಕೈಸಾಲೆಯಲ್ಲಿ ಪುಷ್ಪಾಕಾರವಾದ ಬೋದಿಗೆಗಳುಳ್ಳ ನಾಲ್ಕು ಕಂಬಗಳೂ, ಒಳಗಡೆ ರಂಗಶಾಲೆಯಲ್ಲಿ ಹನ್ನೆರಡು ಕಂಬಗಳೂ, ಸುತ್ತಲೂ ಸಣ್ಣ ಸಣ್ಣ ಕೊಠಡಿಗಳೂ ಇವೆ. ನವರಂಗದ ದ್ವಾರವೂ ಗರ್ಭಗುಡಿಯ ದ್ವಾರವೂ ದಂಪತಿಗಳೇ ಮೊದಲಾದ ಅಲಂಕಾರಯುಕ್ತಗಳಾದ ವಿಗ್ರಹಗಳಿಂದ ಸುಂದರ ವಾಗಿ ಶಿಲ್ಪಿತವಾಗಿವೆ. ಈ ಗವಿಯ ಗೋಡೆಗಳ ಮೇಲೂ ಅನೇಕ ಚಿತ್ರಗಳು ಕಾಣಬರುತ್ತವೆ. ಇವು ಬಹಳವಾಗಿ ಬಣ್ಣ ಗೆಟ್ಟಿವೆ. ಇವುಗಳಲ್ಲಿ ದೇವತೆಗಳು ಬೋಧಿಸತ್ವನನ್ನು ಪೂಜಿಸು ವುದೂ, ವಿವಿಧವಾದ ಭಕ್ತರು ಬುದ್ಧನಿಗೆ ಪುಷ್ಪಾದಿಗಳನ್ನು ಸಮರ್ಪಿಸುವುದೂ ಇಂದ್ರಾದಿ ದೇವತೆಗಳ ಚಿತ್ರಗಳೂ ಬರೆಯು ಲ್ಪಟ್ಟಿವೆ. ಇದರಲ್ಲಿ ಬೋಧಿಸತ್ವನು ಬೇಡನಿಂದ ಹಿಡಿಯಲ್ಪಟ್ಟ ಸ್ವರ್ಣಹಂಸ ರೂಪದಲ್ಲಿ ರಾಜನಿಗೆ ಉಪದೇಶಮಾಡುವುದನ್ನು ತೋರಿಸಿದೆ. ಮಹಾಹಂಸಜಾತಕದಲ್ಲಿ ಹೇಳಿರುವ ಪ್ರಕಾರ ಬುದ್ಧನು ತನ್ನ ಪೂರ್ವಜನ್ಮವೊಂದರಲ್ಲಿ ಧೃತರಾಷ್ಟ್ರನೆಂಬ ಹೆಸರಿ ನಿಂದ ಸ್ವರ್ಣಹಂಸನಾಗಿ ಹಿಮಾಲಯದಲ್ಲಿ ಚಿತ್ರಕೂಟಪರ್ವತದ ಮೇಲೆ ವಾಸಮಾಡುತ್ತಿದ್ದನು. ಆಗ ಕಾಶಿಯಲ್ಲಿ ಸಂಯಮನೆಂಬ ರಾಜನು ಆಳುತ್ತಿದ್ದನು. ಒಂದುದಿನ ಇವನ ರಾಣಿಯಾದ ಕ್ಷೇಮೆಯು ನಿದ್ರೆಮಾಡುತ್ತಿದ್ದಾಗ ಕೆಲವು ಸ್ವರ್ಣಹಂಸಗಳು ಅರಮನೆಗೆ ಬಂದು ಬೌದ್ಧಧರ್ಮವನ್ನು ಉಪದೇಶ ಮಾಡಿದಂತೆ ಸ್ವಪ್ನವನ್ನು ಕಂಡಳು. ಈ ವಿಷಯವನ್ನು ರಾಜನಿಗೆ ಹೇಳಲು ಅವನು ತನ್ನ ಮಂತ್ರಿಗಳಲ್ಲಿ ಪ್ರಸ್ತಾವಮಾಡಿದನು. ಅವರು ಚಿತ್ರಕೂಟದಲ್ಲಿ ಇಂತಹ ಹಂಸಗಳು ಇರುವುದಾಗಿಯೂ ಅವು ಗಳನ್ನು ಹಿಡಿಯುವುದಕ್ಕೆ ತಕ್ಕ ಉಪಾಯವನ್ನು ಮಾಡುವುದಾ ಗಿಯೂ ತಿಳಿಸಿದರು.. ಆನಂತರ ಅವರು ಹೇಳಿದಂತೆ ಕಾಶಿಯ

ಉತ್ತರಭಾಗದಲ್ಲಿ ಒಂದು ರಮ್ಯವಾದ ಸರೋವರವನ್ನು ಕಟ್ಟಿ ಅಲ್ಲಿ ವಿಶೇಷವಾಗಿ ಕಮಲಪುಷ್ಪಗಳೂ ಹಂಸಗಳಿಗೆ ಆಹಾರ ವಸ್ತುಗಳಾದ ಧಾನ್ಯಗಳೂ ಬೆಳೆಯುವಂತೆ ಏರ್ಪಾಡಾಯಿತು. ಸರೋವರವನ್ನು ಕಾಯುವುದಕ್ಕೋಸ್ಕರ ಒಬ್ಬ ಬೇಟೆಗಾರನು ನಿಯಮಿಸಲ್ಪಟ್ಟನು. ಸ್ವಲ್ಪ ಕಾಲದಲ್ಲೇ ಸರೋವರದ ರಮ್ಯತೆಯು ಪಕ್ಷಿಸಮೂಹಗಳಿಗೆ ತಿಳಿದು ಸ್ವರ್ಣಹಂಸಗಳು ತಮ್ಮ ನಾಯಕನಾದ ಸುಮುಖನಲ್ಲಿ ಅರಿಕೆಮಾಡಿಕೊಂಡುವು. ಹಂಸರಾಜನಾದ ಧೃತರಾಷ್ಟ್ರನಿಗೆ ಈ ಸಮಾಚಾರವನ್ನು ತಿಳಿಸಿದಾಗ ಆತನು ಇದು ಮೋಸದ ಕೃತ್ಯವೆಂದು ಹೇಳಿದನು. ಆದರೂ ಇತರ ಹಂಸಗಳ ಆಶಾಭಂಗಮಾಡಬಾರದೆಂದು ಸರೋವರಕ್ಕೆ ಹೋಗಲು ಕೊನೆಗೆ ಸಮ್ಮತಿಸಬೇಕಾಯಿತು. ಹೀಗೆ ಸರೋವರದ ಒಳಿಗೆ ಬಂದು ಇಳಿಯುವಾಗ ಧೃತರಾಷ್ಟ್ರನು ಬೇಟೆಗಾರನ ಬಲೆಗೆ ಸಿಕ್ಕಿಬೀಳಲು ಸುಮುಖನು ವ್ಯಾಕುಲನಾಗಿ ಬೇಟೆಗಾರನನ್ನು ಕುರಿತು ತನ್ನನ್ನು ಧೃತರಾಷ್ಟ್ರನ ಬದಲು ಹಿಡಿದುಕೊಂಡು ಆತನನ್ನು ಬಿಟ್ಟುಬಿಡಬೇಕೆಂದು ಮನಕರಗುವ ಹಾಗೆ ಪ್ರಾರ್ಥಿಸಿದನು. ಬೇಟೆಗಾರನು ಮನಮರುಗಿ ಧೃತರಾಷ್ಟ್ರನನ್ನು ಬಿಟ್ಟುಬಿಟ್ಟನು. ಆಗ ಧೃತರಾಷ್ಟ್ರ ಸುಮುಖರು ಕಾಶೀರಾಜನ ಆಸ್ಥಾನಕ್ಕೆ ಬಂದು ಬೌದ್ಧಧರ್ಮವನ್ನುಪದೇಶಿಸಿದರು.

ಮಿಕ್ಕ ಚಿತ್ರಗಳೊಳಗೆ ಬುದ್ಧದೇವನ ಜನನದ ಸಮಯದಲ್ಲಿ ಬಳುಕಿದ ಶರೀರದಿಂದ ಕೂಡಿ ನಿಂತಿರುವ ಸುಂದರಿಯಾದ ಮಾಯಾದೇವಿಯ ಚಿತ್ರವು ಬಹಳ ರಮ್ಯವಾಗಿದೆ. ಇನ್ನೊಂದು ಚಿತ್ರದಲ್ಲಿ ಬುದ್ಧನು ತನ್ನ ಹಿಂದಿನ ಜನ್ಮವೊಂದರಲ್ಲಿ ಸರ್ವಜ್ಞನಾದ ವಿದುರಪಂಡಿತನೆಂಬ ವಿಪ್ರನ ರೂಪದಲ್ಲಿ ಅವತರಿಸಿದ ಕಥೆಯನ್ನು ಹೇಳಿದೆ. ಕುರುರಾಜಧಾನಿಯಾದ ಇಂದ್ರಪ್ರಸ್ಥದಲ್ಲಿ

ಧನಂಜಯನೆಂಬ ರಾಜನು ಒಂದಾನೊಂದು ಕಾಲದಲ್ಲಿ ಆಳು ತ್ತಿದ್ದನು. ಈತನ ಮಂತ್ರಿಯಾದ ವಿದುರ ಪಂಡಿತನು ಬಹು ವಿವೇಕಿಯಾಗಿ ಇಡೀ ಜಂಬೂದ್ವೀಪವನ್ನೇ ತನ್ನ ಸರಳವಾದ ಮಾತಿನಿಂದಲೂ ಬೌದ್ಧಧರ್ಮೋಪದೇಶದಿಂದಲೂ ಒಲಿಸಿ ಕೊಂಡಿದ್ದನು. ಧನಂಜಯನು ಪಗಡೆಯಾಟದಲ್ಲಿ ಬಹು ಯುಕ್ತಿ ವಂತನಾಗಿದ್ದರೂ ಧಾರ್ಮಿಕನಾಗಿಯೂ ದಾನಿಯಾಗಿಯೂ ಬೌದ್ಧವ್ರತ ನಿಷ್ಠನಾಗಿಯೂ ಇದ್ದನು. ಇವನ ಹಾಗೆಯೇ ಧಾರ್ಮಿಕರಾಗಿ ಆಳುತ್ತಿದ್ದ ಬೇರೆ ಮೂರು ಜನ ರಾಜರು ವಿದುರ ಪಂಡಿತನ ಬಳಿಗೆ ಬಂದು ಯಾರು ಹೆಚ್ಚು ಧಾರ್ಮಿಕ ರೆಂಬುದಾಗಿ ಪ್ರಶ್ನೆಮಾಡಿದರು. ವಿದುರಪಂಡಿತನು ಆ ನಾಲ್ಕು ರಾಜರ ಸದ್ಗುಣಗಳೂ ಒಂದು ಚಕ್ರದ ನಾಲ್ಕು ಕೀಲುಗಳೆಂದೂ ಯಾರಲ್ಲಿ ಈ ಗುಣಗಳೆಲ್ಲವೂ ಇರುವುವೋ ಆತನೇ ನಿಜವಾದ ವೈರಾಗಿಯೆಂಬುದಾಗಿಯೂ ಹೇಳಿದನು. ಆಗ ಆ ನಾಲ್ಕು ರಾಜರೂ ಸಂತೋಷಪಟ್ಟು ಹಿಂದಿರುಗಿದರು. ಈ ನಾಲ್ವರಲ್ಲಿ ಒಬ್ಬನಾದ ವರುಣನು ತನ್ನ ನಾಗಲೋಕಕ್ಕೆ ಹೋಗಿ ತನ್ನ ರಾಣಿ ಯಾದ ವಿಮಲೆಗೆ ವಿದುರ ಪಂಡಿತನ ವಿಷಯವನ್ನು ತಿಳಿಸಲು ಆಕೆಯು ಆತನ ಮಾತನ್ನು ತಾನೂ ಕೇಳಲಿಚ್ಛಿಸಿ ತಾನು ರೋಗಗ್ರ ಸ್ತಳಾಗಿರುವುದಾಗಿಯೂ ತನ್ನ ರೋಗನಿವಾರಣೆಗೆ ವಿದುರಪಂಡಿ ತನ ಹೃದಯವು ಆವಶ್ಯಕವಾಗಿ ಬೇಕೆಂಬುದಾಗಿಯೂ ಹೇಳಿದಳು. ನಾಗರಾಜನು ಆಗ ತನ್ನ ಮಗಳಾದ ಇರಂದತಿಯನ್ನು ಕರೆಸಿ ವಿದುರಪಂಡಿತನ ಹೃದಯವನ್ನು ತಂದುಕೊಡಬಲ್ಲವನನ್ನು ವಿವಾಹಮಾಡಿಕೊಳ್ಳುವಂತೆ ಹೇಳಿದನು. ಯಕ್ಷರ ನಾಯಕ ನಾದ ಪೂರ್ಣಕನು ಇರಂದತಿಯನ್ನು ವಿವಾಹಮಾಡಿಕೊಳ್ಳ ಬೇಕೆಂದು ಧನಂಜಯನ ಬಳಿಗೆ ಬಂದು ಪಗಡೆಯಾಟಕ್ಕೆ



ಏಳನೆಯ ಗುಹೆಯ ಗರ್ಭಗುಡಿಯ ಬಾಗಿಲು

ಕರೆದನು. ಈ ಆಟಕ್ಕೆ ವಿದುರಪಂಡಿತನನ್ನು ಪಂತವನ್ನಾಗಿ ಕಟ್ಟಿ ಧನಂಜಯನು ಸೋತುಹೋದನು. ಪೂರ್ಣಕನು ವಿದುರ ಪಂಡಿತನ ಹೃದಯವನ್ನು ತೆಗೆದುಕೊಳ್ಳಲಾರದೆ ಅವನನ್ನೇ ನಾಗಲೋಕಕ್ಕೆ ಕರೆದೊಯ್ದನು. ಅಲ್ಲಿ ವಿದುರಪಂಡಿತನು ಆರು ದಿನಗಳಿದ್ದು ತನ್ನ ಮಾತುಗಳಿಂದ ವರುಣನನ್ನೂ ವಿಮಲೆ ಯನ್ನೂ ಮೆಚ್ಚಿಸಿ ಕುರುರಾಜ್ಯಕ್ಕೆ ಮರಳಿ ಬಂದನು.

ನಾಲ್ಕನೆಯ ಗವಿಯು ೮೯ ಅಡಿ ಚವರವುಳ್ಳ ದೊಡ್ಡ ವಿಹಾರ. ಇದರಲ್ಲಿ ೨೮ ಕಂಬಗಳೂ ಬುದ್ಧಸಂಬಂಧವಾದ ಅನೇಕ ಶಿಲ್ಪಗಳೂ ಇವೆ.

ಆರನೆಯ ಗವಿಯಿಂದ ಮುಂದಕ್ಕೆ ಕೆಲವು ಮಹಾಯಾನ ಶಾಖೆಗೆ ಸೇರಿದುವು. ಆರನೆಯ ಗವಿಯಲ್ಲಿ ಎರಡು ಅಂತಸ್ತು ಗಳಿವೆ. ಏಳನೆಯ ಗವಿಯ ಹಿಂಭಾಗದಲ್ಲಿ ಬುದ್ಧನು ಭಕ್ತರಿಗೆ ಆಶೀರ್ವಾದಮಾಡುವಂತೆ ಕೆತ್ತಿದ ಪ್ರತಿಮೆ ಇದೆ. ಒಂಭತ್ತನೆಯ ಗವಿಯು ೪೫ ಅಡಿ ಉದ್ದವಿರುವ ಚೈತ್ಯವೆಂಬ ಬೌದ್ಧರ ಗುಡಿ. ಅಗಲವಾದ ಮಧ್ಯ ಅಂಕಣಕ್ಕೂ, ಇದರ ಎಡಬಲ ಪಾರ್ಶ್ವಗ ಳಲ್ಲಿರುವ ಸಣ್ಣ ಅಂಕಣಗಳಿಗೂ ಮಧ್ಯೆ ಕಂಬಗಳ ಸಾಲುಗಳೂ, ಮಧ್ಯ ಅಂಕಣದ ಹಿಂಭಾಗದಲ್ಲಿ ಬೌದ್ಧರ ಸ್ತೂಪವೂ, ಈ ಸ್ತೂಪದ ಹಿಂದುಗಡೆ ಅರ್ಧವರ್ತುಳವಾದ ಪ್ರದಕ್ಷಿಣವೂ ಇವೆ. ಹತ್ತನೆಯ ಗವಿಯು ಮತ್ತೂ ದೊಡ್ಡ ಚೈತ್ಯ. ೯೫ ಅಡಿ ಉದ್ದವೂ ೪೧ ಅಡಿ ಅಗಲವೂ, ೩೬ ಅಡಿ ಎತ್ತರವೂ ಇದೆ. ಇದರಲ್ಲಿ ಗೋಡೆಯಮೇಲೆ ಈಗ ಬಣ್ಣಗೆಟ್ಟಿರುವ ಚಿತ್ರಗಳ ಗುರುತುಗಳು ಕಾಣಬರುತ್ತವೆ. ಇವುಗಳಲ್ಲಿ ಅನೇಕ ಬಹಳ ರಸಭಾವಯುಕ್ತವಾಗಿವೆ. ಈ ಚಿತ್ರಗಳ ವ್ಯಕ್ತಿಗಳು ಸಾಂಚಿಯ ಚಿತ್ರಗಳಲ್ಲಿ ಕಾಣುವಂತಹ ಉಡುಪುಗಳನ್ನು ಧರಿಸಿವೆ. ಒಂದು

ಚಿತ್ರದಲ್ಲಿ ಬೋಧಿವೃಕ್ಷದ ಪೂಜೆಗಾಗಿ ಪರಿವಾರಯುಕ್ತರಾದ ರಾಜದಂಪತಿಗಳು ಬಂದಿರುವಂತೆ ತೋರಿಸಿದೆ. ಹನ್ನೊಂದನೆಯ ಗವಿಯಲ್ಲಿ ಪುಷ್ಪಗಳ ಮತ್ತು ಪಕ್ಷಿಗಳ ಅನೇಕ ಚಿತ್ರಗಳೂ, ಗರ್ಭಗುಡಿಯಲ್ಲಿ ಬುದ್ಧನ ಮುಂದೆ ಮಂಡಿಯೂರಿ ಕುಳಿತಿರುವ ಪೂಜಕನ ಮೂರ್ತಿಯೂ ನೋಡತಕ್ಕುವಾಗಿವೆ. ಹನ್ನೆರಡನೆಯ ಗವಿಯು ೩೬ ಅಡಿ ಚೌಕವಿರುವ ವಿಹಾರ. ೧೬ನೆಯ ಗವಿಯು ದೊಡ್ಡ ಇಪ್ಪತ್ತು ಕಂಬಗಳುಳ್ಳ, ೬೫ ಅಡಿ ಚೌಕದ ವಿಹಾರ. ಇಲ್ಲಿಯ ಗೋಡೆಗಳಮೇಲೆ ಒಬ್ಬ ರಾಜಸ್ತ್ರೀಯ ಮರಣವೂ, ಸಿದ್ಧಾರ್ಥಕುಮಾರನು ಬಾಣಪ್ರಯೋಗಮಾಡುವುದೂ, ಮತ್ತು ಆನೆಗಳ ಮೆರವಣಿಗೆಯೂ ಕಾಣಬರುತ್ತವೆ. ೧೭ನೆಯ ಗವಿಯಲ್ಲಿ ಬುದ್ಧನು ಭಿಕ್ಷುಕನಾಗಿ ತನ್ನ ಮನೆಯ ಬಾಗಿಲಿಗೆ ಬಂದಾಗ ಅವನ ಪತ್ನಿಯಾದ ಯಶೋಧರೆಯು ಅವನಿಗೆ ಭಿಕ್ಷವನ್ನು ನೀಡುವುದಕ್ಕೆ ಅವನ ಕುಮಾರನಾದ ರಾಹುಲನನ್ನು ಕರೆತಂದು ಪತಿಯ ದರ್ಶನಮಾಡಿದುದು ಚಿತ್ರಿತವಾಗಿದೆ; ಈ ಚಿತ್ರದಲ್ಲಿ ಭಯದಿಂದಲೂ ಭಕ್ತಿಯಿಂದಲೂ ಯಶೋಧರೆಯು ಓರೆಗಣ್ಣಿನಲ್ಲಿ ನೋಡುತ್ತಿರಲು ಬುದ್ಧನು ಶಾಂತಿಯಿಂದಲೂ, ಕರುಣೆಯಿಂದಲೂ, ವೈರಾಗ್ಯಯುಕ್ತವಾದ ವಿಶ್ವಾಸದಿಂದಲೂ ಅವಳನ್ನು ಈಕ್ಷಿಸುವುದು ಮನೋಹರವಾಗಿ ಕಾಣಿಸಿದೆ. ಈ ಗವಿಯಲ್ಲೇ ಇನ್ನೊಂದು ಚಿತ್ರದಲ್ಲಿ ಸಿಂಹದ ಬೇಟೆಯನ್ನೂ ಮತ್ತೊಂದರಲ್ಲಿ ವಿಜಯನೆಂಬ ರಾಜಕುಮಾರನು ದೋಣಿಗಳಿಂದ ಸಮುದ್ರವನ್ನು ದಾಟಿ ಸಿಂಹಳ ದ್ವೀಪಕ್ಕೆ ತಲುಪಿದ ಕಥೆಯನ್ನೂ ನಿರೂಪಿಸಿದ್ದಾರೆ. ಸಿಂಹಳನು ಸಿಂಹಳದ್ವೀಪವನ್ನು ಕುರಿತು ತನ್ನ ವಿಶಿಷ್ಟಪರಿವಾರದೊಂದಿಗೆ ಪ್ರಯಾಣಮಾಡಿ ಅಲ್ಲಿ ಇಳಿಯುತ್ತಲೇ ಅಲ್ಲಿದ್ದ ರಾಕ್ಷಸಿಯರು ಇವನ ಜನಗಳನ್ನು

ತಮ್ಮ ಮೋಹಪಾಶದಲ್ಲಿ ಸಿಕ್ಕಿಸಿಕೊಂಡರು. ಆದರೆ ಸಿಂಹಳನು ಮಾತ್ರ ತನಗುಂಟಾದ ಸ್ವಪ್ನದಿಂದ ಎಚ್ಚರಗೊಂಡು ವಿಚಿತ್ರ ವಾದ ಶ್ವೇತಾಶ್ವವೊಂದರಮೇಲೆ ಕುಳಿತು ಪಾರಾದನು. ಅನಂತರ ಒಂದು ಸೈನ್ಯವನ್ನು ಕಟ್ಟಿ ಪ್ರತಿಯೊಬ್ಬ ಸೈನಿಕನಿಗೂ ಒಂದೊಂದು ಮಂತ್ರವನ್ನು ಹೇಳಿಕೊಟ್ಟು ಮರಳಿ ಸಿಂಹಳಕ್ಕೆ ಬಂದು ರಾಕ್ಷಸಿ ಯರನ್ನೆಲ್ಲ ಸದೆಬಡಿದನು. ಅನೇಕ ರಾಕ್ಷಸಿಯರು ಸಮುದ್ರ ದಲ್ಲಿ ಬಿದ್ದು ಸತ್ತರು. ಕೆಲವರು ಓಡಿಹೋದರು. ಅವರ ಪಟ್ಟಣವು ನಾಶವಾಯಿತು. ಸಿಂಹಳನು ಅಲ್ಲಿ ಪಟ್ಟಾಭಿಷಿಕ್ತ ನಾಗಿ ಆ ದ್ವೀಪಕ್ಕೆ ತನ್ನ ಹೆಸರನ್ನಿಟ್ಟನು.

ಇನ್ನೊಂದು ಚಿತ್ರದಲ್ಲಿ ಬುದ್ಧದೇವನು ಆಸನಾರೂಢನಾಗಿ ಉಪದೇಶಮಾಡುತ್ತಿರುವುದೂ, ಮಹಾರಾಜನಾದ ಅಜಾತ ಶತ್ರುವು ಪರಿವಾರದೊಡನೆ ಗುರುವಿನ ಪಾದದ ಬಳಿ ಕುಳಿತು ಭಕ್ತಿಯಿಂದ ಉಪದೇಶವನ್ನು ಕೇಳುತ್ತಿರುವುದೂ ಬಹಳ ರಮ್ಯ ವಾಗಿ ಚಿತ್ರಿಸಲ್ಪಟ್ಟಿವೆ. ಇದೇ ಗವಿಯಲ್ಲಿ ಇನ್ನೊಂದು ಕಡೆ ಅಂತರಿಕ್ಷದಲ್ಲಿ ದೇವತೆಗಳು ಹಾರಿಹೋಗುತ್ತಿರುವುದನ್ನು ತೋರಿ ಸಿರುವುದು ಮನೋಹರವಾಗಿದೆ. ಇನ್ನೊಂದು ಗೋಡೆಯ ಮೇಲೆ ಬರೆದಿರುವ ರಾಜರಾಣಿಯರ ಪ್ರಣಯಜೀವನ ಚಿತ್ರಗಳು ಬಹು ಸುಂದರವಾಗಿವೆ.

ಹತ್ತೊಂಭತ್ತನೆಯ ಗವಿಯು ಒಂದು ಚೈತ್ಯ. ಆದರೆ ಇದರೊಳಗಿನ ಸ್ತೂಪದ ಮುಂಭಾಗದಲ್ಲಿ ಬುದ್ಧನ ಪ್ರತಿಮೆ ಯೊಂದು ಕೆತ್ತಲ್ಪಟ್ಟಿರುವುದು. ಈ ಗವಿಯ ಹೊರಗಡೆ ಕೆತ್ತಿ ರುವ ನಾಗದಂಪತಿಗಳ ಶಿಲ್ಪವು ಬಹಳ ರಮ್ಯವಾಗಿದೆ. ಇಪ್ಪ ತ್ತೊಂದನೆಯ ಗವಿಯಿಂದ ಇಪ್ಪತ್ತೊಂಭತ್ತರವರೆಗಿನ ಗವಿಗಳು ಮಹಾಯಾನ ಶಾಖೆಯವು. ಇವುಗಳಲ್ಲಿ ಇಪ್ಪತ್ತಾರನೆಯದು



ಅಲಂಕರಣ

By courtesy of the Archæological Dept. of
H. E. H. the Nizam's Govt.



ಅರಮನೆಯಲ್ಲಿ ಒಂದು ದೃಶ್ಯ

By courtesy of the India Society, London



ಆಕಾಶದಲ್ಲಿ ಸಂಚರಿಸುವ ಅಪ್ಸರೆಯರು

By courtesy of the India Society, London



ಚೈತ್ಯ (೧೯ನೆಯ ಗುಹೆ)

By courtesy of the Archæological Dept., Govt. of India

೬೮ ಅಡಿ ಉದ್ದವಿರುವ ಒಂದು ಚೈತ್ಯ. ಇದರ ಇಪ್ಪತ್ತಾರು ಕಂಬಗಳ ಮೇಲ್ಗಟ್ಟಿನಲ್ಲೂ ಗೋಡೆಗಳಮೇಲೂ ಕೆತ್ತಿರುವ ಗೊಂಬೆಗಳ ಸಾಲೂ, ಎಡಗಡೆಯ ಗೋಡೆಯಮೇಲೆ ದೇಹ ತ್ಯಾಗಮಾಡುತ್ತ ಮಲಗಿರುವ ಬುದ್ಧನ ಬಲು ದೊಡ್ಡ ಪ್ರತಿಮೆಯೂ, ಇನ್ನೊಂದು ಕಡೆ ಬುದ್ಧನನ್ನು ಮಾರನು ಪರೀಕ್ಷಿಸುವ ಚಿತ್ರವೂ ಇವೆ. ಇಲ್ಲಿಯ ಸ್ತೂಪದ ಸುತ್ತಲೂ ಬುದ್ಧನ ಪ್ರತಿಮೆಗಳಿವೆ.





ಕಂಭದ ಬೋದಿಗೆಗಳು (೧೯ ನೆಯ ಗುಹೆ)

By courtesy of the Archæological Dept. Govt. of India



ಕಂಬದ ಬೋದಿಗೆಗಳು (ಆನೆಯ ಗುಹೆ)

By courtesy of the Archæological Dept Govt of India.

## ೩. ಎಲ್ಲೋರ[1]

ಕಲಾಪ್ರಪಂಚದಲ್ಲಿ ಬಣ್ಣದ ಚಿತ್ರಗಳಿಂದ ಅಜಂತಕ್ಕೆ ಉತ್ಕೃಷ್ಟತೆಯು ಬಂದಿರುವಂತೆ ವಾಸ್ತುಶಿಲ್ಪದಿಂದ ಎಲ್ಲೋರಕ್ಕೆ ಪ್ರಸಿದ್ಧಿ ಬಂದಿದೆ. ಈ ಗವಿಗಳು ನೈಜಾಮಿರಾಜ್ಯದ ವಾಯವ್ಯದ ಮೂಲೆಯಲ್ಲಿ ದೇವಗಿರಿ ಕೋಟೆಯಿಂದ ಆರುಮೈಲಿ ದೂರದಲ್ಲಿವೆ. ಇವುಗಳನ್ನು ದೇವಗಿರಿಯ ಸುತ್ತಮುತ್ತಣ ಪ್ರಸ್ಥಭೂಮಿಗೂ ಪಶ್ಚಿಮದ ಕಡೆಯ ತಗ್ಗುನಾಡಿಗೂ ಇರುವ ಘಟ್ಟಗಳಲ್ಲಿ ಕೊರೆದಿದೆ. ಈ ಘಟ್ಟಗಳ ಸಾಲೊಂದು ಎಲ್ಲೋರವೆಂಬ ಪ್ರಾಚೀನಗ್ರಾಮದ ಬಳಿ ಸುಮಾರು ೩೦೦ ಅಡಿಗಳ ಎತ್ತರ ಪಶ್ಚಿಮಾಭಿಮುಖವಾಗಿ ಎದ್ದು ನಿಂತಿದೆ. ಇಲ್ಲಿ ಹುಟ್ಟು ಬಂಡೆಯಲ್ಲಿ ಸುಮಾರು ಒಂದೂವರೆ ಮೈಲಿಗಳ ಉದ್ದಕ್ಕೂ ೩೩ ಗವಿಗಳು ಕೊರೆಯಲ್ಪಟ್ಟಿವೆ. ಇವುಗಳನ್ನು ನೋಡುವುದಕ್ಕೆ ಅನುಕೂಲಿಸುವಂತೆ ಔರಂಗಾಬಾದ್ ಸ್ಟೇಷನ್ನಿನಿಂದ ಎಲ್ಲೋರದ ಕೈಲಾಸಗವಿಯ ಬಾಗಿಲವರೆಗೂ ಬಸ್ಸುಗಳು ಓಡಾಡುತ್ತವೆ.

ಈ ಗವಿಗಳು ಪಶ್ಚಿಮದ ಬಯಲು ನಾಡನ್ನು ಎದುರು ನೋಡುತ್ತವೆ. ಇವುಗಳಲ್ಲಿ ಬೌದ್ಧಮತಕ್ಕೆ ಸೇರಿದುವು ಹನ್ನೆರಡು ದಕ್ಷಿಣಭಾಗದಲ್ಲಿವೆ.[2] ಪೌರಾಣಿಕವಾದ ಹದಿನೇಳು ಗವಿಗಳು ಮಧ್ಯದಲ್ಲಿವೆ. ಉತ್ತರದಲ್ಲಿ ಐದು ಜೈನಗವಿಗಳಿವೆ. ಇವುಗಳಲ್ಲಿ ಮೊದಲು ಬೌದ್ಧಗವಿಗಳೂ, ತರುವಾಯ ಪೌರಾಣಿಕ

---

[1] ಇದನ್ನು (ವೇರೂಳ)ಎಲ್ಲೂರು ಎಂದು ಕರೆಯುವುದೂ ವಾಡಿಕೆಯಲ್ಲಿದೆ.

[2] ಇವುಗಳಲ್ಲಿ ಮೊದಲನೆಯದಾದ ೧೩ ನೆಯ ಗುಹೆಯು ಬೌದ್ಧಗುಹೆಗಳಿಗೂ ಬ್ರಾಹ್ಮಣಗುಹೆಗಳಿಗೂ ಮಧ್ಯಸ್ಥವಾಗಿದೆ.

ಗವಿಗಳೂ, ಕಡೆಕಡೆಗೆ ಜೈನಗವಿಗಳೂ ಕೊರೆಯಲ್ಪಟ್ಟಿರಬೇಕು. ಬೌದ್ಧಗವಿಗಳನ್ನು ಸುಮಾರು ಕ್ರಿ. ಶ. ೪೦೦ ರಿಂದ ೬೦೦ ವರೆಗೂ ಪೌರಾಣಿಕ ಗವಿಗಳನ್ನು ಸುಮಾರು ೬೦೦ ರಿಂದ ೮೦೦ ವರೆಗೂ ತರುವಾಯ ಜೈನಗವಿಗಳನ್ನು ೮೦೦ ರಿಂದ ಒಂದು ನೂರು ವರ್ಷಗಳೊಳಗಾಗಿಯೂ ಕೊರೆದಂತೆ ತೋರುತ್ತದೆ. ಇವುಗಳನ್ನು ಕೊರೆದ ಕಾಲದಲ್ಲಿ ಮೊದಲು ಬಾದಾಮಿಯ ಚಾಲುಕ್ಯರೂ ತರುವಾಯ ಮಾನ್ಯಖೇಡದ ರಾಷ್ಟ್ರಕೂಟರೂ ರಾಜ್ಯವಾಳುತ್ತಿದ್ದುದರಿಂದ ಕರ್ಣಾಟಕದ ಕಲೆಯ ಚರಿತ್ರೆಯಲ್ಲಿ ಎಲ್ಲೋರ ಗವಿಗಳನ್ನು ವರ್ಣಿಸಬೇಕಾಗಿದೆ. ಈ ಗವಿಗಳಿರುವ ತಾಲ್ಲೂಕಿಗೆ ಈಗಲೂ ಕನ್ನಡ ತಹಸೀಲ್ ಎಂದು ಹೆಸರು. ಇಲ್ಲಿಯ ಗವಿಗಳಲ್ಲಿ ದಖನ್ನಿನ ಧಾರ್ಮಿಕಚರಿತ್ರೆಯೂ ಕಲೆಯ ಚರಿತ್ರೆಯೂ ಉದಾಹೃತವಾಗಿವೆ.

ಕರ್ನಾಟಕದ ಮತ್ತು ಇದರ ಸುತ್ತಣ ಪ್ರದೇಶಗಳಲ್ಲಿ ವಾಸ್ತುಶಿಲ್ಪದ ಹೆಗ್ಗುರುತುಗಳು ನಮಗೆ ಕಾಣಬರುವ ಕಾಲದಲ್ಲಿ ಮೊದಲು ಮೊದಲು ಬೌದ್ಧರೇ ಹೆಚ್ಚಾಗಿ ಕಟ್ಟಡಗಳನ್ನು ಕಟ್ಟುತ್ತಿದ್ದರು. ಇವು ಬೌದ್ಧಧರ್ಮಕ್ಕೆ ಸಂಬಂಧಪಟ್ಟುವಾಗಿ ಉತ್ತರದೇಶದ ಬೌದ್ಧಶಿಲ್ಪರೀತಿಯನ್ನು ಅನುಕರಿಸಿ ಬೆಳೆದ ಪಶ್ಚಿಮ ದಖನ್ನಿನ ಗುಹಾಶಿಲ್ಪಕ್ಕೆ ಅನ್ವಯಿಸುತ್ತಿತ್ತು. ಈ ಗುಹಾರೀತಿಯಲ್ಲಿಯೇ ಎಲ್ಲೋರದ ಬೌದ್ಧಗವಿಗಳು ಕೊರೆಯಲ್ಪಟ್ಟವೆ. ಇವುಗಳಲ್ಲಿ ಬೌದ್ಧರೀತಿಗೆ ಸಾಮಾನ್ಯವಾದ ಚೈತ್ಯಗಳೂ, ಅವುಗಳಿಗಿಂತಲೂ ಕ್ರಮೇಣ ಹೆಚ್ಚಾಗಿ ಉಪಯೋಗಕ್ಕೆ ಬಂದ ವಿಹಾರಗಳೂ ಕಾಣಬರುತ್ತವೆ. ಎಲ್ಲೋರದ ಬೌದ್ಧಗವಿಗಳಲ್ಲಿ ವಿಹಾರಗಳೇ ವಿಶೇಷವಾಗಿವೆ. ಅಜಂತದ ವಿಹಾರಗಳಿಗಿಂತಲೂ ಇವು ದೊಡ್ಡವು. ಇವುಗಳಲ್ಲಿ ಕೆಲವು

3

ಎರಡು ಅಥವಾ ಮೂರು ಅಂತಸ್ತುಳ್ಳವುಗಳಾಗಿವೆ. ಬರಬರುತ್ತ ಇವುಗಳಲ್ಲಿ ಬೌದ್ಧಮತ ಸಂಬಂಧವಾದ ಮೂರ್ತಿಗಳನ್ನು ಹೆಚ್ಚು ಹೆಚ್ಚಾಗಿ ಕೊರೆದಿದೆ. ಇವುಗಳಲ್ಲಿ ವಿಹಾರಗಳ ಗರ್ಭ ಗುಡಿಯಲ್ಲಿರುವ ಬುದ್ಧನ ಪ್ರತಿಮೆಗಳೂ, ಬುದ್ಧನನ್ನು ಉಪಚ ರಿಸಲು ನಿಂತಿರುವ ಇಂದ್ರಾದಿ ದೇವತೆಗಳ ಮೂರ್ತಿಗಳೂ, ಬಹಳ ಸುಂದರವಾಗಿವೆ. ಇವಲ್ಲದೆ ಅನೇಕ ಮೂರ್ತಿಗಳ ತಲೆಯ ಮೇಲೆಯೂ ಸುತ್ತಲೂ ಅಲಂಕಾರಗಳು ಹೆಚ್ಚಾಗಿವೆ.

ಬೌದ್ಧಮತವನ್ನು ಕ್ರಮೇಣ ಮೂಲೆಗೊತ್ತಿ ಪೌರಾಣಿಕ ವಾದ ಶೈವ ವೈಷ್ಣವಮತಗಳು ಸುಮಾರು ಏಳು ಎಂಟನೆಯ ಶತಮಾನಗಳ ವೇಳೆಗೆ ವಿಶೇಷ ಪ್ರಾಬಲ್ಯಕ್ಕೆ ಬಂದುವು. ಈ ಪೌರಾಣಿಕ ಮತಸ್ಥರು ತಮ್ಮ ಕಾಲದಲ್ಲಿ ಎಲ್ಲೋರದ ಗುಡ್ಡ ದಲ್ಲಿ ಕೈಲಾಸದೇವಾಲಯವೇ ಮೊದಲಾದಂತಹ ಕಟ್ಟಡ ಗಳನ್ನೂ ಅವುಗಳಲ್ಲಿಯ ರಮಣೀಯವಾದ ಪ್ರತಿಮೆಗಳನ್ನೂ ಕೊರೆಯಿಸಿದರು. ಈ ಕಟ್ಟಡಗಳು ದ್ರಾವಿಡ ಶಿಲ್ಪರೀತಿಗೆ ಸೇರಿವೆ. ಇವುಗಳಲ್ಲಿ ಪಲ್ಲವರ ಕಾಲದಲ್ಲಿ ಬಾದಾಮಿಗೆ ಬಂದು ನೆಲಸಿದ ದ್ರಾವಿಡಶಿಲ್ಪವೇ ವೃದ್ಧಿಯಾಗಿದೆ.

ಎಂಟನೆಯ ಶತಮಾನದ ತರುವಾಯ ಕನ್ನಡದೇಶದಲ್ಲಿ ಜೈನಮತವು ಬಹಳ ವೃದ್ಧಿಯಾದಂತೆ ತೋರುತ್ತದೆ. ಕ್ರಿಸ್ತಶಕ ಎಂಟರಿಂದ ಹನ್ನೊಂದನೆಯ ಶತಮಾನದವರೆಗೂ ಜೈನರು ಕರ್ನಾಟಕದಲ್ಲಿ ಶಿಲ್ಪಕ್ಕೆ ಬಹಳ ಆಶ್ರಯಕೊಟ್ಟರು. ಈ ಕಾಲದ ಮೊದಲುಭಾಗದಲ್ಲಿ ಎಲ್ಲೋರದ ಗುಡ್ಡದ ಉತ್ತರಭಾಗದಲ್ಲಿ ಜೈನಗವಿಗಳನ್ನು ಕೊರೆಯುವುದಕ್ಕೆ ಆರಂಭವಾಯಿತು. ಇವು ಗಳಲ್ಲಿಯ ಕೆಲಸವು ಬ್ರಾಹ್ಮಣಗವಿಯ ಕೆಲಸಗಳನ್ನು ಬಹಳ ಮಟ್ಟಿಗೆ ಅನುಕರಿಸುತ್ತದೆ. ಇವುಗಳೇ ದಕ್ಷಿಣದೇಶದ ಗುಹಾ

ಶಿಲ್ಪದಲ್ಲಿ ಕಡೆಕಡೆಯವು. ಕ್ರಿಸ್ತಶಕ ಹತ್ತು ಹನ್ನೊಂದನೆಯ ಶತಮಾನದಲ್ಲಿ ಶ್ರವಣಬೆಳಗೊಳವೇ ಮೊದಲಾದ ಕಡೆಗಳಲ್ಲಿ ಜೈನರು ಕಟ್ಟಿದ ಕಟ್ಟಡಗಳು ಎಲ್ಲೋರದ ಜೈನಶಿಲ್ಪವನ್ನು ಹೋಲುತ್ತವೆ.

ಪೌರಾಣಿಕ ಮತ್ತು ಜೈನ ಗವಿಗಳಲ್ಲಿ ಪ್ರತಿಮೆಗಳು ಬಹು ಸಂಖ್ಯಾಕವಾಗಿಯೂ, ಸ್ಫೂರ್ತಿಯುಕ್ತವಾಗಿಯೂ ಕೆತ್ತಲ್ಪಟ್ಟಿವೆ. ಇದಲ್ಲದೆ ಕೈಲಾಸದೇವಾಲಯದಲ್ಲಿ ಬಣ್ಣದ ಚಿತ್ರಗಳೂ ಬಹಳ ವಾಗಿದ್ದಂತೆ ಕಾಣಬರುತ್ತದೆ. ಈ ದೇವಾಲಯದ ಗೋಡೆಗಳ ಮತ್ತು ಚಾವಣಿಗಳ ಮೇಲೆ ಕಾಲಾನುಕಾಲದಲ್ಲಿ ಬಣ್ಣದ ಚಿತ್ರಗಳು ಮೂರು ವರಸೆಯಾಗಿ ಒಂದರಮೇಲೊಂದು ಬರೆಯಲ್ಪಟ್ಟಿದ್ದಂತೆ ತಿಳಿಯಬಂದಿದೆ. ಇದರಲ್ಲಿ ಹಳೆಯ ಎರಡು ವರಸೆ ಚಿತ್ರಗಳು ಬಹಳ ರಮ್ಯವಾಗಿ ಅಜಂತದ ಚಿತ್ರಗಳನ್ನು ಹೋಲುತ್ತಿದ್ದುವು. ಇವುಗಳಲ್ಲಿ ಕೆಲವು ಮಾತ್ರ ಈಗ ಉಳಿದಿವೆ. ಇವುಗಳನ್ನು ನೈಜಾಮಿಸರಕಾರದವರು ಬಹಳ ಎಚ್ಚರಿಕೆಯಿಂದ ಕಾಪಾಡುತ್ತಿದ್ದಾರೆ.

ಎಲ್ಲೋರ ಬೌದ್ಧಗವಿಗಳು ಕ್ರಿ.ಶ. ನಾಲ್ಕನೆಯ ಶತಮಾನದಿಂದ ಎಂಟನೆಯ ಶತಮಾನದ ಒಳಗಾಗಿ ಕೊರೆಯಲ್ಪಟ್ಟವೆಂದು ಮೇಲೆ ಹೇಳಿದೆ. ಇವುಗಳಲ್ಲಿ ಮುಖ್ಯವಾದುವನ್ನು ಇಲ್ಲಿ ವರ್ಣಿಸಬಹುದು. ದಕ್ಷಿಣದ ಕೊನೆಯಿಂದ ಮೊದಲನೆಯದು ಸುಮಾರು ೪೨ ಅಡಿ ಚೌಕವುಳ್ಳ ವಿಹಾರ. ಇದರ ಸುತ್ತಲೂ ಎಂಟು ಕೊಠಡಿಗಳಿವೆ. ಎರಡನೆಯದು ಮುಖಮಂಟಪ ಮತ್ತು ದ್ವಾರಪಾಲಕರಿಂದ ಕೂಡಿದ ದೊಡ್ಡ ಪೂಜಾಶಾಲೆ. ೪೮ ಅಡಿ ಚದರವಿರುವ ಈ ಶಾಲೆಯಲ್ಲಿ ಸುಂದರವಾದ ಅನೇಕ ಕಂಬಗಳಿವೆ. ಹಿಂಭಾಗದಲ್ಲಿ ದೀರ್ಘಾಕಾರರಾದ ದ್ವಾರಪಾಲಕರಿಂದ

ರಕ್ಷಿತವಾದ ಗರ್ಭಗುಡಿಯಲ್ಲಿ ಪರಿವಾರಸಮೇತನಾಗಿ ಬುದ್ಧನು ಕುಳಿತಿರುವನು. ಮೂರನೆಯ ಗವಿಯಾದ ವಿಹಾರದಲ್ಲೂ, ಸುತ್ತಣಕೊಠಡಿಗಳೂ, ನಾಗರಿಂದ ಪರಿವೃತನಾಗಿ ಪದ್ಮಾಸೀನನಾದ ಬುದ್ಧನ ಮೂರ್ತಿಯನ್ನುಳ್ಳ ಗರ್ಭಗುಡಿಯೂ ಕಾಣಬರುವುವು. ನಾಲ್ಕನೆಯ ಗವಿಯಲ್ಲಿ ಬುದ್ಧನು ಬೋಧಿವೃಕ್ಷದ ಕೆಳಗೆ ಕುಳಿತಿರುವಂತೆ ಕಾಣುತ್ತದೆ. ಐದನೆಯ ಗವಿಗೆ ಢೇಡರ (ಅಥವ ಹರಿಜನರ) ಗವಿಯೆಂದೂ ಹೆಸರು. ಇದು ೧೧೭ ಅಡಿ ಉದ್ದವೂ ೫೮|| ಅಡಿ ಅಗಲವೂ ಇರುವುದರಿಂದ ಎಲ್ಲೋರದ ವಿಹಾರಗಳಲ್ಲೆಲ್ಲಾ ಇದೇ ಅತ್ಯಂತ ದೊಡ್ಡದು. ಇದರ ಮೂರು ಅಂಕಣಗಳಲ್ಲಿ ಸಾಲುಕಂಬಗಳ ಮಧ್ಯದಲ್ಲಿರುವ ದೊಡ್ಡ ಅಂಕಣದಲ್ಲಿ ನೀಳವಾದ ಎರಡು ಜಗಲಿಗಳಿವೆ. ಇವುಗಳ ಮೇಲೆ ಬೌದ್ಧಯತಿಗಳು ಕುಳಿತುಕೊಳ್ಳುತ್ತಿದ್ದಂತೆ ತೋರುತ್ತದೆ. ಈ ಗವಿಯು ಯತಿಗಳ ಮಹಾಸಭೆಗೆ ಕೇಂದ್ರಸ್ಥಾನವಾಗಿದ್ದಿರಬೇಕು. ಆರನೆಯ ಗವಿಯಲ್ಲಿ ಬುದ್ಧನ ಮೂರ್ತಿಯಲ್ಲದೆ ದಕ್ಷಿಣದ ಗೋಡೆಯಮೇಲೆ ಸರಸ್ವತಿಯ ಮೂರ್ತಿಯು ಕಾಣುತ್ತದೆ. ಏಳನೆಯ ಗವಿಯು ಒಂದು ದೊಡ್ಡ ವಿಹಾರ. ೮ನೆಯ ಗವಿಯ ಮುಂಭಾಗದಲ್ಲಿ ಶಿಶುವಾಗಿದ್ದ ಬುದ್ಧನು ತನ್ನ ತಾಯಿತಂದೆಗಳ ಸಮೇತ ಇರುವನು. ಒಂಭತ್ತನೆಯ ಗವಿಯ ಮುಂಗೋಡೆಯನ್ನು ಬಹಳ ಅಲಂಕಾರವಾಗಿ ಕೆತ್ತಿದೆ.

ಎಲ್ಲೋರದ ಗವಿಗಳಲ್ಲೆಲ್ಲಾ ಹತ್ತನೆಯ ಗವಿಯೊಂದೇ ಚೈತ್ಯವೆಂಬ ಬೌದ್ಧಗುಡಿಗಳ ರೂಪದಲ್ಲಿರುವುದು. ಇದಕ್ಕೆ ವಿಶ್ವಕರ್ಮ ಗುಹೆಯೆಂದು ಹೆಸರು. ಇದನ್ನು ಸುಮಾರು ಕ್ರಿ. ಶ. ೬೦೦ ರಲ್ಲಿ ಕೊರೆದಿರಬೇಕು. ಇದರ ಮುಂದೆ ಒಂದು ಅಂಗಳವೂ, ಅಂಗಳದ ಸುತ್ತ ಕಂಬಗಳುಳ್ಳ ಕೈಸಾಲೆಗಳೂ, ಈ ಕೈಸಾಲೆಗಳ ತುದಿಗಳಲ್ಲಿ

ಸುಶಿಲ್ಪಿತವಾದ ಕೊಠಡಿಗಳೂ ಇವೆ. ಚೈತ್ಯಾಲಯದ ಮುಂಬಾಗಿಲ ಮೇಲುಗಡೆ ಕುದುರೆಯ ಲಾಳದ ಆಕಾರದಲ್ಲಿರುವ ಬಲು ದೊಡ್ಡ ಕಿಟಕಿಯೊಂದಿದೆ. ಒಳಗಿನ ಶಾಲೆಯು ೮೬ ಅಡಿ ಉದ್ದ, ೪೩ ಅಡಿ ಅಗಲ, ೩೪ ಅಡಿ ಎತ್ತರ ಉಳ್ಳದ್ದಾಗಿ ದೊಡ್ಡದಾಗಿದೆ. ಇದರ ಮಧ್ಯಅಂಕಣದ ಇಕ್ಕಡೆಗಳಲ್ಲೂ ಕಂಬದ ಸಾಲುಗಳಿವೆ. ಈ ಗವಿಯ ಹಿಂಭಾಗವು ಅರ್ಧವರ್ತುಳಾಕಾರವಾಗಿದೆ. ಹಿಂಭಾಗದ ಮಧ್ಯದಲ್ಲಿ ೨೭ ಅಡಿ ಎತ್ತರವಿರುವ ಸ್ತೂಪವಿದೆ. ಇದರ ಮುಂದೆ ಬುದ್ಧನ ದೊಡ್ಡ ಪ್ರತಿಮೆಯೊಂದು ಕುಳಿತಿದೆ. ಚಾವಣಿಯಲ್ಲಿ ಮರಗೆಲಸದ ಅನುಕರಣೆಯು ಕಾಣಬರುತ್ತದೆ. ಕಂಬಸಾಲುಗಳ ಮೇಲ್ಭಾಗದಲ್ಲಿ ಬುದ್ಧನ, ಬೌದ್ಧ ಗಣಗಳ ಮತ್ತು ಯಕ್ಷರ ಪ್ರತಿಮೆಗಳ ಸಾಲುಗಳನ್ನು ಕೆತ್ತಿದೆ. ಹನ್ನೊಂದನೆಯ ಗವಿಗೆ ಮುಂದುಗಡೆ ಅಂಗಳವೂ ಅದರ ಹಿಂದೆ ಮೂರು ಅಂತಸ್ತುಗಳೂ ಇವೆ. ಮಧ್ಯದ ಅಂತಸ್ತಿನಲ್ಲಿ ಸುತ್ತಲೂ ಐದು ಸಣ್ಣ ಗರ್ಭಗುಡಿಗಳೂ, ಮಧ್ಯದ ಗರ್ಭಗುಡಿಯಲ್ಲಿ ಬುದ್ಧನ ಪ್ರತಿಮೆಯೂ ಇವೆ. ಹನ್ನೆರಡನೆಯ ಗವಿಯು ಮೂರು ಅಂತಸ್ತುಗಳುಳ್ಳದ್ದಾಗಿ ಮುಂದುಗಡೆಯ ಅಂಗಳದಿಂದಲೂ ಅನೇಕಸಾಲು ಕಂಬಗಳುಳ್ಳ ಎರಡು ಶಾಲೆಗಳಿಂದಲೂ ಕೂಡಿದೆ. ಇದರಲ್ಲಿ ಚಾಮರಧಾರಿಗಳಿಂದಲೂ ಗಣಗಳಿಂದಲೂ ಕೂಡಿದ ಬುದ್ಧನ ಪ್ರತಿಮೆಗಳು ಅನೇಕವಾಗಿ ಕೆತ್ತಲ್ಪಟ್ಟಿವೆ. ಎರಡನೆಯ ಅಂತಸ್ತಿನಲ್ಲಿ ಶಿಲ್ಪಕಲೆಯು ವಿಶೇಷವಾಗಿ ಕಾಣಬರುತ್ತದೆ. ಮೂರನೆಯ ಅಂತಸ್ತಿನಲ್ಲಿ ೧೧೫ ಅಡಿ ಉದ್ದವೂ ೭೦ ಅಡಿ ಅಗಲವೂ ಇರುವ ದೊಡ್ಡ ಶಾಲೆಯಿದೆ. ಇದರ ಪಕ್ಕದ ಗೋಡೆಗಳಮೇಲೆ ಸಿಂಹಾಸನಸ್ಥನಾದ ಬುದ್ಧನ ಮೂರ್ತಿಗಳೂ, ಹಿಂಗೋಡೆಗಳ ಮೇಲೆ ಗಿಡಗಳ ಅಥವಾ ಛತ್ರಿಗಳ ನೆರಳಿನಲ್ಲಿ

ಕುಳಿತಿರುವ ಏಳೇಳು ಬುದ್ಧಮೂರ್ತಿಗಳೂ, ಅಂತರಾಳದಲ್ಲಿ ಅನೇಕ ದೊಡ್ಡ ಪ್ರತಿಮೆಗಳೂ, ಗರ್ಭಗುಡಿಯಲ್ಲಿ ಪದ್ಮಾಸನ ದಲ್ಲಿ ಕುಳಿತಿರುವ ಬುದ್ಧನ ಮೂರ್ತಿಯೂ ಸುಂದರವಾಗಿ ಕೆತ್ತಲ್ಪಟ್ಟಿವೆ. ಇದಕ್ಕೆ 'ತ್ರಿಸ್ಥಲದ ಗವಿ' ಎಂದು ಹೆಸರಾಗಿದೆ.

ತ್ರಿಸ್ಥಲದ ಗವಿಯಿಂದ ೫೦ ಗಜದೊಳಗಾಗಿ ಪೌರಾಣಿಕ ಗವಿಗಳ ಸಾಲು ಆರಂಭಿಸುತ್ತದೆ. ಕೈಲಾಸ ದೇವಾಲಯವೂ ಸೇರಿ ಇವು ಒಟ್ಟು ಹದಿನೇಳು ಇರುವುವು. ಇವುಗಳನ್ನು ಮಾಡಿದ ಕಾಲವು ಏಳನೆಯ ಮತ್ತು ಎಂಟನೆಯ ಶತಮಾನ ಗಳು. ಇವುಗಳಲ್ಲಿ ಮುಖ್ಯವಾದುವುಗಳನ್ನು ಮಾತ್ರ ಇಲ್ಲಿ ವರ್ಣಿಸಿದೆ.

ರಾವಣನ ಗವಿಯೆಂಬುದು ರೂಪದಲ್ಲಿ ಬೌದ್ಧಗವಿಗಳಿಗಿಂ ತಲೂ ಬಹಳ ಭಿನ್ನವಾಗಿದೆ. ಮುಂದುಗಡೆ ನಾಲ್ಕು ಕಂಬ ಗಳುಳ್ಳ ಕೈಸಾಲೆಯೂ, ಅದರ ಹಿಂದೆ ಹನ್ನೆರಡು ಕಂಬಗಳ ಶಾಲೆಯೂ, ಹಿಂಭಾಗದಲ್ಲಿ ಸ್ವತಂತ್ರವಾಗಿ ಬಿಡಿಸಿರುವ ದೇವಾಂ ಕಣವೂ ಇವೆ. ಈ ಗವಿಯು ಒಟ್ಟು ೮೫ ಅಡಿ ಉದ್ದವಾಗಿದೆ. ಇದರ ಗೋಡೆಗಳ ಮೇಲೆ ಬಹಳ ಸುಂದರವಾದ ಶಿಲ್ಪಗಳನ್ನು ಕೆತ್ತಿದೆ. ಇವುಗಳಲ್ಲಿ ಮಹಿಷಾಸುರನನ್ನು ದುರ್ಗಿಯು ವಧಿಸು ವುದೂ, ಶಿವನು ತಾಂಡವವಾಡುವುದೂ, ರಾವಣನು ಕೈಲಾಸ ಪರ್ವತವನ್ನು ಅಲುಗಾಡಿಸುವುದೂ, ಭೈರವನ ಮೂರ್ತಿಯೂ ಪ್ರಶಂಸನೀಯವಾಗಿವೆ. ಒಂದು ಶಿಲ್ಪದಲ್ಲಿ ಶಿವನೂ ಪಾರ್ವ ತಿಯೂ ಚದುರಂಗವಾಡುತ್ತಿರುವಾಗ ಸೋತ ಶಿವನ ವಿಸ್ಮಯವೂ ಗೆದ್ದ ಪಾರ್ವತಿಯ ಸಂತೋಷವೂ ಚಿತ್ರಿತವಾಗಿದೆ. ಉತ್ತರದ ಗೋಡೆಯ ಮೇಲೆ ದುರ್ಗಿ, ಲಕ್ಷ್ಮಿ, ವರಾಹಾವತಾರ, ಚತು ರ್ಭುಜನಾದ ವಿಷ್ಣು, ಲಕ್ಷ್ಮೀನಾರಾಯಣ ಮೊದಲಾದ

ಮೂರ್ತಿಗಳಿವೆ. ಪ್ರದಕ್ಷಿಣದಲ್ಲಿ ಭೇತಾಳಗಳು ಕುಣಿಯುವುದೂ, ವೀರಭದ್ರ ಮತ್ತು ಗಣೇಶರಿಂದ ರಕ್ಷಿಸಲ್ಪಟ್ಟ ಬ್ರಾಹ್ಮಿ, ಮಾಹೇಶ್ವರಿ ಮೊದಲಾಗಿ ವಾಹನ ಯುಕ್ತರಾದ ಸಪ್ತಮಾತೃಕೆಯರೂ ಕೆತ್ತಲ್ಪಟ್ಟಿರುವುವು. ಗರ್ಭಗುಡಿಯಲ್ಲಿ ಭಿನ್ನವಾದ ದುರ್ಗಿಯ ಮೂರ್ತಿಯು ಇರುವುದು.

ದಶಾವತಾರದ ಗವಿಗೆ ಕೆಲವು ಮೆಟ್ಟಲುಗಳನ್ನು ಹತ್ತಿಹೋಗಬೇಕು. ಇದರ ಮುಂದುಗಡೆ ದೊಡ್ಡ ಅಂಗಳವೂ ಅಂಗಳದ ಮಧ್ಯದಲ್ಲಿ ನಂದಿಮಂಟಪವೂ ಇವೆ. ಈ ದೇವಾಲಯದ ಕೆಳಗಿನ ಅಂತಸ್ತಿನಲ್ಲಿ ಸಾಲುಕಂಬಗಳೂ, ಮೇಲಿನ ಅಂತಸ್ತಿನಲ್ಲಿ ೧೦೯ ಅಡಿ ಉದ್ದವೂ ೯೫ ಅಡಿ ಅಗಲವೂ ಇರುವ ಖಚಿತವಾದ ನಾಲ್ವತ್ತೆರಡು ಕಂಬಗಳಿಂದ ಕೂಡಿದ ಶಾಲೆಯೂ ಇವೆ. ಇಲ್ಲಿಯ ಗೋಡೆಗಳ ಮೇಲೆ ರಾವಣನ ಗವಿಯಂತೆಯೇ ಸುಂದರವಾದ ದೃಶ್ಯಗಳನ್ನು ಕೊರೆದಿದೆ. ಇವುಗಳಲ್ಲಿ ಶಿರಸ್ಸುಗಳ ಮಾಲೆಯನ್ನು ಧರಿಸಿರುವ ಭೈರವ, ಗಿರಿಜಾಮಹೇಶ್ವರರ ವಿವಾಹ, ಲಿಂಗದಿಂದ ಉದ್ಭವಿಸುವ ಮಹೇಶ್ವರ, ಶಿವಮಾರ್ಕಂಡೇಯ, ಆನೆಗಳು ಅಭಿಷೇಕ ಮಾಡುತ್ತಿರುವ ಗಜಲಕ್ಷ್ಮಿ, ಅನಂತಸರ್ಪದ ಮೇಲೆ ಪವಡಿಸಿರುವ ವಿಷ್ಣು, ವಾಮನ, ನರಸಿಂಹ ಮೊದಲಾದ ಮೂರ್ತಿಗಳು ಕಾಣಬರುತ್ತವೆ.

ಹದಿನಾರನೆಯದಾದ ಕೈಲಾಸದೇವಾಲಯವು ಎಲ್ಲೋರ ಗವಿಗಳಲ್ಲಿ ಅತ್ಯಂತ ರಮಣೀಯವಾದುದು. ಭೂಲೋಕದ ವಾಸ್ತುಶಿಲ್ಪದಲ್ಲಿ ಇದೊಂದು ವಿಚಿತ್ರವೆನಿಸುವುದು. ಏಕೆಂದರೆ ಇದರಲ್ಲಿ ಒಂದೇ ಒಂದು ಹುಟ್ಟುಬಂಡೆಯಿಂದ ಮಹಾದ್ವಾರ, ಪ್ರಾಕಾರ, ಶಿಖರ, ಕಲಶ, ಲಿಂಗ ಮೊದಲಾದ ಸರ್ವಾಂಗಗಳಿಂದ ಕೂಡಿದ ಎರಡು ಅಂತಸ್ತಿನ ದೊಡ್ಡ ದ್ರಾವಿಡ

ದೇವಾಲಯವು ಕೊರೆಯಲ್ಪಟ್ಟಿದೆ. ಇದನ್ನು ನಿರ್ಮಿಸಿದ ಸ್ಥಪತಿಗಳು ಒಂದು ನೂರು ಅಡಿಗಳಿಗಿಂತಲೂ ಆಳವಾಗಿಯೂ, ಇನ್ನೂರೆಪ್ಪತ್ತಾರು ಅಡಿ ಉದ್ದವಾಗಿಯೂ ನೂರೈವತ್ತುನಾಲ್ಕು ಅಡಿ ಅಗಲವಾಗಿಯೂ ಒಂದು ಅಂಗಳವನ್ನು ಕೊರೆದು ಅದರ ಮಧ್ಯದ ಕಲ್ಲಿನ ದಿಮ್ಮಿಯಲ್ಲಿ ೧೬೪ ಅಡಿ ಉದ್ದವೂ, ೧೦೯ ಅಡಿ ಅಗಲವೂ, ೯೨ ಅಡಿ ಎತ್ತರವೂ ಇರುವ ಶಿವಾಲಯವನ್ನು ನಿರ್ಮಿಸಿದ್ದಾರೆ. ಈ ದೇವಾಲಯದ ಬಳಿ ಎರಡು ಸುಖಚಿತವಾದ ಕಂಬಗಳೂ ಎರಡು ದೊಡ್ಡ ಆನೆಗಳೂ ಕೊರೆಯಲ್ಪಟ್ಟಿವೆ. ಇದರ ಮಹಾದ್ವಾರದ ಇಕ್ಕಡೆಗಳಲ್ಲೂ ವಿಷ್ಣುವಿನ ಅವತಾರಗಳೂ, ಶಿವಲೀಲೆಗಳೂ. ಮತ್ತು ದಿಕ್ಪಾಲಕರಿಗೆ ಸಂಬಂಧಪಟ್ಟ ಕೆಲವು ದೃಶ್ಯಗಳೂ ಸ್ಫೂರ್ತಿವತ್ತಾಗಿ ಕೊರೆಯಲ್ಪಟ್ಟಿವೆ.

ಮಹಾದ್ವಾರದ ಎದುರಿನ ಮಂಟಪದ ಮುಖದಲ್ಲಿ ಗಜಲಕ್ಷ್ಮಿಯನ್ನು ಚಿತ್ರಿಸಿದೆ. ಇದರ ಮೇಲ್ಭಾಗದಲ್ಲಿ ಮತ್ತೊಂದು ಮುಖಮಂಟಪವೂ ಅದರ ಹಿಂದುಗಡೆ ಸುಮಾರು ೫೫ ಅಡಿ ಚದರವುಳ್ಳ ಮತ್ತು ೧೬ ಖಚಿತವಾದ ಕಂಬಗಳಿಂದ ಕೂಡಿದ ರಂಗಶಾಲೆಯೂ ಇವೆ. ಅಂತರಾಳದ ಬಳಿ ಮೇಲ್ಛಾವಣಿಯಲ್ಲಿ ಜಟಾಧಾರಿಣಿಯಾದ ದೇವೀಮೂರ್ತಿಯೊಂದನ್ನು ಕೆತ್ತಿದೆ. ದೇವಿಯು ಲಕ್ಷ್ಮಿಯಂತೆ ಕಮಲದ ಮೇಲೆ ನಿಂತಿರುವಳು. ಆಕೆಯ ಅಕ್ಕಪಕ್ಕಗಳಲ್ಲಿ ಬ್ರಹ್ಮನೂ ವಿಷ್ಣುವೂ ಕುಳಿತಿರುವರು. ನಾಲ್ಕು ಮೂಲೆಗಳಲ್ಲಿಯೂ ಗಂಧರ್ವರ ವಿಗ್ರಹಗಳು ಕೆತ್ತಲ್ಪಟ್ಟಿರುವುವು. ಹಿಂದುಗಡೆಗೆ ಸುಮಾರು ೧೫ ಅಡಿ ಚದರವುಳ್ಳ ಮತ್ತು ದೊಡ್ಡ ಶಿವಲಿಂಗದಿಂದ ಕೂಡಿದ ಗರ್ಭಗುಡಿ ಇರುವುದು. ಈ ಗರ್ಭಗುಡಿಯ ಸುತ್ತಲೂ ಮೇಲ್ಛಾವಣಿಯಿಲ್ಲದ ಪ್ರದಕ್ಷಿಣವೂ, ಇದರ ಸುತ್ತ ಐದು ಸಣ್ಣ



ಕೈಲಾಸ ದೇವಾಲಯ

By courtesy of the Archæological Dept., Govt. of India

ದೇವಾಲಯಗಳೂ ಇವೆ. ದೊಡ್ಡ ದೇವಾಲಯಕ್ಕೂ ಈ ಸಣ್ಣ ದೇವಾಲಯಗಳಿಗೂ ಸುಲಕ್ಷಣವಾದ ವಿಮಾನಗಳಿವೆ. ದೊಡ್ಡ ದೇವಾಲಯದ ವಿಮಾನವು ಅಂಗಳದಿಂದ ೯೬ ಅಡಿ ಎತ್ತರ ವಿದೆ. ಈ ವಿಮಾನಗಳು ವಿಧವಿಧವಾಗಿ ಚಮತ್ಕಾರ ಕೌಶಲ ದಿಂದ ಕೆತ್ತಲ್ಪಟ್ಟ ಮೂರ್ತಿಗಳಿಂದಲೂ ಆರೆಗಂಬಗಳಿಂದಲೂ ಕೂಡಿವೆ. ಈ ಮೂರ್ತಿಗಳಲ್ಲಿ ಕೆಲವು ಶಿವನವು, ಕೆಲವು ವಿಷ್ಣು ವಿನವು. ವಿಗ್ರಹಗಳ ಮೇಲುಗಡೆ ಹಾರಾಡುವಂತೆ ಗಂಧರ್ವ ವ್ಯಕ್ತಿಗಳು ಕೆತ್ತಲ್ಪಟ್ಟಿರುವುವು. ದೇವಾಲಯದ ಸುತ್ತ ಹೊರ ಗಡೆ ಅನೇಕವಾಗಿ ಪೌರಾಣಿಕ ಚಿತ್ರಗಳು ಕೆತ್ತಲ್ಪಟ್ಟಿವೆ.

ದೊಡ್ಡ ದೇವಾಲಯದ ಅಡಿಭಾಗದಲ್ಲಿ ಸುತ್ತಲೂ ಆನೆ ಗಳನ್ನು ಕೆತ್ತಿರುವರು. ಈ ಆನೆಗಳ ವಿವಿಧ ರೂಪಗಳು ಪ್ರೇಕ್ಷಕ ರಿಗೆ ಹರ್ಷದಾಯಕಗಳಾಗಿರುವುವು. ಕೆಳಜಗಲಿಯ ಮೇಲೆ ಸಿಂಹ ಗಳೂ, ಆನೆಗಳೂ, ಇತರ ಭಯಂಕರ ರೂಪಗಳೂ ಹೋರಾ ಡುತ್ತಿವೆ. ಮುಂದಿನ ನಂದಿಮಂಟಪಕ್ಕೂ, ಮುಖಮಂಟಪಕ್ಕೂ ಸಂಬಂಧಿಸಿದಂತೆ ರಾಮಾಯಣಕಥೆಯೇ ಮೊದಲಾದ ಅನೇಕ ದೃಶ್ಯಗಳನ್ನು ಕೆತ್ತಿದೆ. ಇವುಗಳಲ್ಲಿ ಒಂದರಲ್ಲಿ ರಾವಣನು ಕೈಲಾ ಸಪರ್ವತವನ್ನು ಎತ್ತುವುದೂ ಪಾರ್ವತಿಯು ಭಯದಿಂದ ಶಿವ ನನ್ನು ಅಪ್ಪಿಕೊಳ್ಳುವುದೂ, ಪ್ರಮಥಗಣಗಳು ಗಾಬರಿಬೀಳು ವುದೂ ಮನೋಹರವಾಗಿ ಶಿಲ್ಪಿತವಾಗಿವೆ. ಯುದ್ಧಕ್ಕೆ ಸೈನ್ಯ ವೊಂದು ನುಗ್ಗುತ್ತಿರುವುದು ಬಲು ಚೆನ್ನಾಗಿದೆ.

ಮುಖಮಂಟಪದ ಮೇಲ್ಛಾವಣಿಯ ಮೇಲೆ ಪುರಾತನ ಕಾಲದ ಬಣ್ಣಚಿತ್ರಗಳಿವೆ. ದೇವಾಲಯದ ಮುಖದ್ವಾರದಲ್ಲಿ ಅದ್ಭುತಾಕಾರವುಳ್ಳ ದ್ವಾರಪಾಲಕರು ಗದಾಧಾರಿಗಳಾಗಿ ನಿಂತಿ ರುವರು. ಅಂಗಳದ ಹೊರಭಾಗಕ್ಕೆ ಉತ್ತರ, ಪೂರ್ವ ಮತ್ತು

ದಕ್ಷಿಣ ಗೋಡೆಗಳ ಉದ್ದಕ್ಕೂ ಆಳವಾಗಿ ಕೊರೆಯಲ್ಪಟ್ಟ ಕೈಸಾಲೆಯಿದೆ. ಈ ಕೈಸಾಲೆಯ ಹಿಂದಿನ ಗೋಡೆಗಳ ಮೇಲೆ ಉತ್ತರಕ್ಕೆ ಹನ್ನೆರಡು ಪೂರ್ವಕ್ಕೆ ಹತ್ತೊಂಭತ್ತು ಮತ್ತು ದಕ್ಷಿಣಕ್ಕೆ ಹನ್ನೆರಡು, ಪೌರಾಣಿಕದೃಶ್ಯಗಳನ್ನು ಸುಲಕ್ಷಣಯುಕ್ತವಾಗಿ ಕೊರೆದಿದೆ. ದಕ್ಷಿಣಭಾಗದ ಕೈಸಾಲೆಯಲ್ಲಿ ಕಂಡುಬರುವ ವಿಗ್ರಹಗಳು ಈ ಪ್ರಕಾರ ಇರುವುವು: (೧) ನಾಲ್ಕು ತೋಳುಗಳಿಂದ ಕೂಡಿ ನಾಲ್ಕು ಕೈಗಳಲ್ಲಿ ಕಲಶ, ರುದ್ರಾಕ್ಷಿ ಮಾಲೆ, ಶಕ್ತಿ ಅಥವಾ ಕಮಲವನ್ನು ಹಿಡಿದುಕೊಂಡು ಜಟಾಧಾರಿಣಿಯಾಗಿ ನಿಂತಿರುವ ದೇವಿ. ಇವಳನ್ನು ಅನ್ನಪೂರ್ಣಾ ಎಂದು ಕರೆಯುವರು. (೨) ಬಾಲಾಜಿಯಾಗಿ ಅವತರಿಸಿದ ಶಿವನೆಂದು ಕರೆಯಲ್ಪಡುವ ಚತುರ್ಭುಜಯುಕ್ತನಾದ ಮೂರ್ತಿ. ಆದರೆ ವಿಷ್ಣುವಿಗಿರುವಂತೆ ಗದೆ, ಚಕ್ರ, ಮತ್ತು ಶಂಖಗಳು ಈ ವಿಗ್ರಹದ ಕೈಗಳಲ್ಲಿವೆ. (೩) ಚತುರ್ಭುಜನಾದ ಕಾಳಿಂಗ ಮರ್ದನಮೂರ್ತಿ. (೪) ಚತುರ್ಭುಜನಾದ ಭೂವರಾಹ ಮೂರ್ತಿ. ಈ ಮೂರ್ತಿಯ ಪಾದದ ಕೆಳಗೆ ಒಂದು ಸರ್ಪವನ್ನು ಕೆತ್ತಿದೆ. (೫) ಚತುರ್ಭುಜನಾದ ಗರುಡವಾಹನ ಮೂರ್ತಿ. (೬) ಆರು ಕೈಗಳುಳ್ಳ ತ್ರಿವಿಕ್ರಮಮೂರ್ತಿ. ಈ ವಿಗ್ರಹದ ಕೈಗಳಲ್ಲಿ ಉದ್ದವಾದ ಕತ್ತಿ, ಗದೆ, ಗುರಾಣಿ, ಚಕ್ರ ಮತ್ತು ಶಂಖಗಳಿವೆ. ಎಡಗಾಲು ಮೇಲಕ್ಕೆತ್ತಿ ಬಲಿಚಕ್ರವರ್ತಿಯ ತಲೆಯ ಮೇಲ್ಭಾಗಕ್ಕಿರುವುದು. (೭) ಗೋವರ್ಧನೋದ್ಧರಣ ಮೂರ್ತಿ. (೮) ಶೇಷಶಾಯಿಮೂರ್ತಿ. ಈ ವಿಗ್ರಹದ ನಾಭಿ ಕಮಲದಿಂದ ಬ್ರಹ್ಮನು ಉದ್ಭವಿಸುತ್ತಿರುವ ಹಾಗೆ ಕೆತ್ತಿದೆ. (೯) ನರಸಿಂಹಮೂರ್ತಿ. (೧೦) ತ್ರಿಮುಖಗಳಿಂದಲೂ ಚತುರ್ಭುಜಗಳಿಂದಲೂ ಕೂಡಿರುವ ಮೂರ್ತಿಯೊಂದು (ಬ್ರಹ್ಮ?)

ಲಿಂಗವನ್ನು ಕೀಳಲು ಪ್ರಯತ್ನಪಡುತ್ತಿರುವಂತೆ ಕೆತ್ತಲ್ಪಟ್ಟಿದೆ. (೧೧) ಚತುರ್ಭುಜನಾದ ಶಿವಮೂರ್ತಿ (೧೨) ಅರ್ಧನಾರೀಶ್ವರಮೂರ್ತಿ.

ಹಿಂಭಾಗದ ಕೈಸಾಲೆಯಲ್ಲಿರುವ ವಿಗ್ರಹಗಳು—(೧) ಕಾಲಭೈರವ (೨) ಕಪಾಲಭೈರವ (೩) ನವಯೋಗಿನೀ ಭೈರವ (೪) ಸಿದ್ಧಿಯೋಗಿನೀ ಭೈರವ (೫) ಭಲ್ಲುಕ ಭೈರವ (೬) ಭೂಪಾಲಭೈರವ (೭) ಶಿವ ಅಥವಾ ಭೈರವ (೮) ಮಹಾದೇವ (೯) ಬ್ರಹ್ಮ, (೧೦, ೧೧, ೧೨) ಶಿವ (೧೩) ಗಂಗಾಧರ (೧೪) ಲಿಂಗೋದ್ಭವಮೂರ್ತಿ (೧೫) ಶಿವ (೧೬) ಉಮಾಮಹೇಶ್ವರ (೧೭) ಷಡ್ಭುಜಗಳಿಂದ ಕೂಡಿದ ಸದಾಶಿವ (೧೮) ವೀರಭದ್ರ (೧೯) ಗಿರಿಜಾಕಲ್ಯಾಣ.

ಉತ್ತರಭಾಗದ ಕೈಸಾಲೆಯಲ್ಲಿರುವ ವಿಗ್ರಹಗಳು—(೧) ಮಾರ್ಕಂಡೇಶ್ವರ (೨) ಇಬ್ಬರು ಕಿರಾತರಿಂದ ಪೂಜಿಸಲ್ಪಡುತ್ತಿರುವ ಶಿವ (೩) ಶಿವನೂ ಪಾರ್ವತಿಯೂ ಚದುರಂಗವಾಡುತ್ತಿರುವುದು (೪) ಶಿವನೂ ಪಾರ್ವತಿಯೂ ನಾರದನ ಸಂಗೀತವನ್ನು ಕೇಳುತ್ತಿರುವುದು (೫) ಶಿವಪಾರ್ವತಿಯರು ಕೈಲಾಸದಲ್ಲಿರುವಾಗ ರಾವಣನು ಕೈಲಾಸವನ್ನೆತ್ತುವುದು. (೬) ಎರಡು ಕೈಗಳುಳ್ಳ ಋಷಿ (೭) ಶಿವಪಾರ್ವತಿಯರು ಎದುರು ಬದುರಾಗಿ ಕುಳಿತಿರುವುದು (೮) ಕಾರ್ತಿಕೇಯ (೯, ೧೦) ಶಿವಪಾರ್ವತಿಯರು (೧೧) ಉಮಾಮಹೇಶ್ವರ (೧೨) ರಾವಣನ ಯಜ್ಞ; ಈತನು ತನ್ನ ಒಂಭತ್ತು ತಲೆಗಳನ್ನೂ ಆಹುತಿ ಕೊಟ್ಟು ಹತ್ತನೆಯ ತಲೆಯನ್ನು ಕಡಿಯಲುದ್ಯುಕ್ತನಾಗಲು ಶಿವನು ಪ್ರತ್ಯಕ್ಷನಾಗುವನು.

ಕೈಲಾಸದೇವಾಲಯದ ದಕ್ಷಿಣಭಾಗದಲ್ಲಿರುವ ಯಜ್ಞಶಾಲೆ

ಯಲ್ಲಿ ಸಪ್ತಮಾತೃಕೆಯರ ವಿಗ್ರಹಗಳಿರುತ್ತವೆ. ಶಾಲೆಯ ಮುಂಭಾಗದಲ್ಲಿರುವ ಎರಡು ಕಂಬಗಳು ಮತ್ತು ಎರಡು ಅರೆ ಗಂಬಗಳು ಎತ್ತರವಾದ ಸ್ತ್ರೀವಿಗ್ರಹಗಳಿಂದ ಶೋಭಿಸುತ್ತಿವೆ.

ಒಟ್ಟಿನಲ್ಲಿ ಈ ಕೈಲಾಸದೇವಾಲಯವನ್ನು ಬಿಜಾಪುರದ ಜಿಲ್ಲೆಯ ಪಟ್ಟದ ಕಲ್ಲಿನಲ್ಲಿರುವ ಶಿವಾಲಯದ ಮಾದರಿಯ ಮೇಲೆ ಕೊರೆದಿರುವಂತೆ ತೋರುತ್ತದೆ. ಅಗಾಧವೂ ರಮ್ಯವೂ ಆದ ಈ ಮಹಾದೇವಾಲಯವು ಭಾರತೀಯ ಶಿಲ್ಪಿಗಳ ಸಾಹಸಕ್ಕೆ ಉದಾಹರಣೆಯಾಗಿ ನಿಂತಿದೆ. ಇದರ ಶಿಲ್ಪ ರೀತಿಯು ಪಲ್ಲವರ ಕಾಲದ ಪ್ರಾಚೀನ ದ್ರಾವಿಡ ರೀತಿಯಲ್ಲಿ ಒಂದು ಪ್ರಭೇದವಾಗಿದೆ. ಇದನ್ನು ಕಟ್ಟಿಸಿದವನು ಕನ್ನಡದೇಶಕ್ಕೆ ಕೀರ್ತಿಯನ್ನು ತಂದ ರಾಷ್ಟ್ರಕೂಟ ವಂಶಕ್ಕೆ ಸೇರಿದ ಮೊದಲನೆಯ ಕೃಷ್ಣರಾಜನೆಂದು ಇನ್ನೊಂದು ಗವಿಯಲ್ಲಿರುವ ಶಾಸನದಿಂದ ತಿಳಿಯಬರುತ್ತದೆ.

ಕೈಲಾಸ ಗವಿಯ ಪಕ್ಕದಲ್ಲಿ ಕೆಲವು ಸಣ್ಣ ದೊಡ್ಡ ಗವಿಗಳಿರುವುವು. ಇವುಗಳಲ್ಲಿ ಲಂಕೇಶ್ವರನ ಗವಿಯೆಂಬುದು ಅನೇಕ ಕಂಬಗಳಿಂದಲೂ, ಶಿಲ್ಪಿತವಾದ ಪೌರಾಣಿಕ ಕಥೆಗಳಿಂದಲೂ ಕೂಡಿದೆ. ಇನ್ನೊಂದು ಗವಿಗೆ ರಾಮೇಶ್ವರನ ಗವಿಯೆಂದು ಹೆಸರು. 'ಕುಂಬಾರರ ಗವಿಯಲ್ಲಿ ಏಳು ಕುದುರೆಗಳನ್ನು ಹೂಡಿದ ವಿಮಾನದಲ್ಲಿ ಸೂರ್ಯದೇವನು ನಿಂತಿರುವನು. ಇನ್ನು ಸ್ವಲ್ಪ ದೂರದಲ್ಲಿ ಗುಡ್ಡದ ಮೇಲಿಂದ ಧುಮುಕುವ ಜಲಪಾತವೂ ಅದಕ್ಕೆ ಸೇರಿದ ಕುಂಟೆಯೂ ಇರುವುವು. ಇದರ ಉತ್ತರಕ್ಕೆ ಸೀತೆಯ ಕುಂಡವೆಂಬ ದೊಡ್ಡ ಗವಿಯಿರುವುದು. ಇದು ಬೊಂಬಾಯಿಯ ಬಳಿಯಿರುವ ಎಲಿಫೆಂಟದ ತ್ರಿಮೂರ್ತಿ ಗವಿ ದೇವಾಲಯವನ್ನು ಹೋಲುತ್ತದೆ. ಇದರ ರಂಗಶಾಲೆಯು



ರಾಮೇಶ್ವರ ಗುಹೆಯ ಒಂದು ಕಂಭ

By courtesy of the Archæological Dept., Govt. of India



ರಾಮೇಶ್ವರ ಗುಹೆಯ ಕೊನೆಯಲ್ಲಿ

By courtesy of the Archæological Dept., Govt of India

ಸುಮಾರು ೧೫೦ ಅಡಿ ಉದ್ದವೂ ೯೫ ಅಡಿ ಅಗಲವೂ ಇದೆ. ನಾಲ್ಕು ಬಾಗಿಲುಗಳುಳ್ಳ ಇದರ ಗರ್ಭ ಗುಡಿಯಲ್ಲಿ ಲಿಂಗವನ್ನು ಪ್ರತಿಷ್ಠೆಮಾಡಿದೆ. ಇಲ್ಲಿಯ ಗೋಡೆಗಳ ಮೇಲೆ ಅನೇಕ ಪೌರಾಣಿಕ ದೃಶ್ಯಗಳನ್ನು ಸುಂದರವಾಗಿ ಕೆತ್ತಿದೆ. ಇದರ ಉತ್ತರ ಭಾಗದಲ್ಲಿ ಗೋಡೆಯ ಮೇಲೆ ಆಗತಾನೆ ಸ್ನಾನಮಾಡಿ ಎದ್ದು ಬಂದಂತೆ ಸೀತೆಯ ರೂಪವನ್ನು ಕೊರೆದಿದೆ. ಪೌರಾಣಿಕ ದೃಶ್ಯಗಳಲ್ಲಿ ಕೆಲವನ್ನು ಇಲ್ಲಿ ಹೇಳಬಹುದು. ಗವಿಯ ಪಶ್ಚಿಮಾಂಕಣದ ದಕ್ಷಿಣ ಭಾಗದಲ್ಲಿ ರಾವಣನು ಕೈಲಾಸವನ್ನೆತ್ತುವ ದೃಶ್ಯವಿದೆ. ಉತ್ತರ ಭಾಗದಲ್ಲಿ ಭೈರವನ ವಿಗ್ರಹವಿರುವುದು. ದಕ್ಷಿಣ ಭಾಗಕ್ಕಿರುವ ಪಡಸಾಲೆಯ ಪಶ್ಚಿಮದಲ್ಲಿ ಶಿವಪಾರ್ವತಿಯರು ಚದುರಂಗವಾಡುತ್ತಿರುವ ದೃಶ್ಯವಿದೆ. ಉತ್ತರ ಭಾಗದಲ್ಲಿ ಗಿರಿಜಾಕಲ್ಯಾಣವು ಕೆತ್ತಲ್ಪಟ್ಟಿರುವುದು. ಉತ್ತರ ಭಾಗದ ಪಡಸಾಲೆಯಲ್ಲಿ ಕಮಲದ ಮೇಲೆ ಕುಳಿತು ಮಹಾಯೋಗಿಯಾಗಿರುವ ಶಿವನ ಮೂರ್ತಿಯು ಇದೆ. ಇಲ್ಲಿ ಬೌದ್ಧ ಗುಹೆಗಳ ಶಿಲ್ಪದಲ್ಲಿ ಕಂಡುಬರುವಂತೆ ಕಮಲಕಾಂಡಗಳನ್ನು ನಾಗರ ಹೆಡೆಯುಳ್ಳ ವಿಗ್ರಹಗಳು ಹಿಡಿದಿರುವುವು. ಮಹಾಯೋಗಿಯ ಪ್ರತಿಮೆಗೆ ಎದುರು ಭಾಗದಲ್ಲಿ ಶಿವನು ತಾಂಡವ ನಾಟ್ಯವಾಡುತ್ತಿರುವಂತೆ ಕೆತ್ತಲ್ಪಟ್ಟಿದೆ. ಅವನ ಎಡಭಾಗದಲ್ಲಿ ಪಾರ್ವತಿಯು ಕುಳಿತಿರುವಳು.

ಎಲ್ಲೋರದಲ್ಲಿ ಪೌರಾಣಿಕ ಗವಿಗಳಿಂದ ೨೦೦ ಗಜ ಉತ್ತರಕ್ಕೆ ಐದು ಜೈನಗವಿಗಳಿವೆ. ಇವುಗಳನ್ನು ಕ್ರಿ.ಶ. ಎಂಟನೆಯ ಶತಮಾನದಿಂದೀಚೆಗೆ ಕೊರೆದಿದೆ. ಇವುಗಳಲ್ಲಿ ಚಿಕ್ಕ ಕೈಲಾಸವೆಂಬುದು ದೊಡ್ಡ ಕೈಲಾಸದೇವಾಲಯವನ್ನು ಬಹುಮಟ್ಟಿಗೆ ಅನುಕರಿಸುತ್ತದೆ. ಈ ಜೈನಗವಿಗಳಲ್ಲೆಲ್ಲಾ ಅತ್ಯಂತ ಸುಂದರ

ವಾದ ಇಂದ್ರಸಭೆಗೆ ಮುಂಭಾಗದಲ್ಲಿ ಮಹಾದ್ವಾರವೂ, ಒಳಗಡೆ ಪಾರ್ಶ್ವನಾಥ, ಗೋಮಟೇಶ್ವರ, ಮಹಾವೀರ ಮೊದಲಾದವರ ಆಲಯಗಳೂ ಇವೆ. ಪಾರ್ಶ್ವನಾಥವಿಗ್ರಹದ ತಲೆಯಮೇಲೆ ಏಳುಹೆಡೆಯ ಸರ್ಪವೂ, ಅಕ್ಕಪಕ್ಕಗಳಲ್ಲಿ ವಿವಿಧಭಂಗಿಗಳಲ್ಲಿರುವ ದೇವತೆಗಳೂ, ಮೇಲ್ಭಾಗದಲ್ಲಿ ವಿದ್ಯಾಧರರೂ, ಪಾದದ ಬಳಿ ಇಬ್ಬರು ಭಕ್ತರೂ ಇರುವರು. ಹಿಂಭಾಗದ ಗೋಡೆಯೊಂದರಲ್ಲಿ ಇಂದ್ರ ಮತ್ತು ಇಂದ್ರಾಣಿಯರ ವಿಗ್ರಹಗಳು ಕೆತ್ತಲ್ಪಟ್ಟಿರುವುವು. ಆಗ್ನೇಯದ ಅಂಗಳದಲ್ಲಿ ದೊಡ್ಡ ಆನೆಯೂ ಇದರ ಪಕ್ಕದಲ್ಲಿ ಮುರಿದುಬಿದ್ದಿರುವ ಮಾನಸ್ತಂಭವೂ ಇವೆ. ಅಂಗಳದ ಮಧ್ಯದಲ್ಲೂ ಒಂದು ಜಿನಾಲಯವಿದೆ. ಅಂಗಳದ ಹಿಂಭಾಗಕ್ಕೆ ಎರಡು ಶಾಲೆಗಳೂ ಇವುಗಳ ಗೋಡೆಗಳ ಮೇಲೆ ಅನೇಕ ಜೈನಮೂರ್ತಿಗಳೂ ಮುಖ್ಯಗರ್ಭಗುಡಿಯಲ್ಲಿ ಮಹಾವೀರನ ಮೂರ್ತಿಯೂ ಇವೆ. ಗರ್ಭಗುಡಿಯ ಬಳಿ ಇರುವ ಸಣ್ಣದಾದ ಆಲಯವೊಂದರಲ್ಲಿ ಇಂದ್ರ ಮತ್ತು ಇಂದ್ರಾಣಿಯರ ವಿಗ್ರಹಗಳು ಚೆನ್ನಾಗಿ ಕೆತ್ತಲ್ಪಟ್ಟಿವೆ. ಕೆಳಭಾಗಕ್ಕಿರುವ ಹಜಾರದ ಎರಡು ಅರೆಗಂಬಗಳ ಮೇಲೆ ಶಾಂತಿನಾಥನ ವಿಗ್ರಹಗಳಿರುವುವು. ಈ ವಿಗ್ರಹಗಳಲ್ಲಿ ಒಂದರ ಕೆಳಗಡೆ 'ಸೋಹಿಲ ಬ್ರಹ್ಮಚಾರಿಯಿಂದ ಮಾಡಲ್ಪಟ್ಟ ಶಾಂತಿನಾಥವಿಗ್ರಹ'ವೆಂಬುದಾಗಿ ಬರೆಯಲ್ಪಟ್ಟಿರುವುದು. ಈ ಶಾಸನದ ಅಕ್ಷರಗಳು ಸುಮಾರು ೯ ಅಥವಾ ೧೦ನೆಯ ಶತಮಾನದವು. ಹೀಗೆಯೇ ಇನ್ನೊಂದು ಆಲಯದ ಕಂಬವೊಂದರಲ್ಲಿರುವ ವಿಗ್ರಹದ ಕೆಳಗಡೆ 'ನಾಗವರ್ಮನಿಂದ ಮಾಡಲ್ಪಟ್ಟ ಪ್ರತಿಮೆ' ಎಂದು ಬರೆದಿದೆ. ಇಂದ್ರಸಭೆಯ ಮೇಲ್ಭಾಗದಲ್ಲಿ ದೊಡ್ಡದಾದ ಹಜಾರವೊಂದಿದೆ. ಈ ಹಜಾರವು ಒಂದಾನೊಂದು ಕಾಲದಲ್ಲಿ ವರ್ಣಚಿತ್ರಗಳಿಂದ



ಇಂದ್ರಸಭೆಯ ಒಂದುಭಾಗ

By courtesy of the Archæological Dept., Govt. of India



ಇಂದ್ರಸಭೆಯ ಎರಡು ಕಂಭಗಳು

By Courtesy of the Archaeological Dept., Govt. of India

ಶೋಭಿಸುತ್ತಿತ್ತು. ಈಗಲೂ ಕೆಲವು ಚಿತ್ರಗಳನ್ನು ಮೇಲ್ಚಾವಣಿಯಲ್ಲಿ ನಾವು ನೋಡಬಹುದು. ಹಜಾರದ ಮುಂಭಾಗದಲ್ಲಿ ಸುಮಾರು ೧೪ ಅಡಿ ಎತ್ತರವಿರುವ ಇಂದ್ರ ಮತ್ತು ಇಂದ್ರಾಣಿಯರ ವಿಗ್ರಹಗಳಿರುವುವು. ಹಜಾರದ ಗೋಡೆಗಳ ಮೇಲೆ ಪಾರ್ಶ್ವನಾಥ, ಗೋಮಟ ಮತ್ತು ಮಹಾವೀರನ ಮೂರ್ತಿಗಳು ಕೆತ್ತಲ್ಪಟ್ಟಿರುವುವು. ಮೂರ್ತಿಗಳು ವೃಕ್ಷಗಳ ಕೆಳಗೆ ಕುಳಿತಿರುವ ಹಾಗೆ ಚಿತ್ರಿತವಾಗಿ ಅಕ್ಕಪಕ್ಕಗಳಲ್ಲಿ ಗಂಧರ್ವರ ಮೂರ್ತಿಗಳು ವಿವಿಧರೀತಿಯಲ್ಲಿ ಕೆತ್ತಲ್ಪಟ್ಟಿರುವುವು. ಈ ಹಜಾರಕ್ಕೆ ಆಗ್ನೇಯಭಾಗದಲ್ಲಿರುವ ಮತ್ತೊಂದು ಸಣ್ಣ ಗುಹಾಲಯದಲ್ಲಿಯೂ ಅನೇಕ ಜೈನಮೂರ್ತಿಗಳೂ, ಇಂದ್ರ ಇಂದ್ರಾಣಿಯರೂ, ಮತ್ತು ಕೆಲವು ಬಣ್ಣದ ಚಿತ್ರಗಳೂ ಇವೆ. ವಾಯುವ್ಯದಲ್ಲಿರುವ ಆಲಯವೊಂದರ ಮುಂಭಾಗವು ಸುಖಚಿತವಾಗಿ ಕೆತ್ತಲ್ಪಟ್ಟು ವಿಗ್ರಹಗಳು ಬಹಳ ಚೆನ್ನಾಗಿರುವುವು. ದ್ವಾರದ ಇಕ್ಕಡೆಗಳಲ್ಲಿ ದೇವಿಯ ಮೂರ್ತಿಗಳಿರುವುವು. ಎಡಭಾಗದ ದೇವಿಯು ಅಷ್ಟಭುಜವುಳ್ಳವಳು. ಇವಳ ಬಳಿ ಮಯೂರವಿರುವುದರಿಂದ ಇವಳು ಸರಸ್ವತಿಯಾಗಿರಬಹುದೆಂದು ಹೇಳುತ್ತಾರೆ.

ಇಂದ್ರಸಭೆಯಿಂದ ಮತ್ತೂ ಉತ್ತರಕ್ಕೆ ಜಗನ್ನಾಥಸಭೆಯೆಂಬ ಮತ್ತೊಂದು ಗವಿಯಿದೆ. ಇದರಲ್ಲಿಯೂ ಅಂಗಳವೂ, ಪಡಸಾಲೆಯೂ, ತೀರ್ಥಂಕರರ ಮೂರ್ತಿಗಳೂ ಇವೆ. ಈ ಜೈನಗವಿಗಳ ಗುಡ್ಡದ ಮೇಲುಗಡೆ ಬಂಡೆಯಲ್ಲೇ ಕೊರೆದ ೧೬ ಅಡಿ ಎತ್ತರವುಳ್ಳ ಪಾರ್ಶ್ವನಾಥಸ್ವಾಮಿಯ ಮೂರ್ತಿಯು ನಿಂತಿದೆ.

---

## ೪. ಉಪಸಂಹಾರ

ಶಿಲ್ಪಕಲೆಯನ್ನು ಉಪಾಸನೆಮಾಡುವ ಯಾತ್ರಿಕರೆಲ್ಲರಿಗೂ ಅಜಂತ ಮತ್ತು ಎಲ್ಲೋರದ ಗವಿಗಳು ಪವಿತ್ರವಾದ ಯಾತ್ರಾಸ್ಥಾನಗಳಾಗಿವೆ. ಇವುಗಳಲ್ಲಿ ಪ್ರಾಚೀನ ದಾಕ್ಷಿಣಾತ್ಯರ ಚಿತ್ರಕಲೆ ಮತ್ತು ವಾಸ್ತುಶಿಲ್ಪಗಳು ಪಡೆದ ಅತ್ಯಂತ ಉನ್ನತಿಯು ಮೂರ್ತಿಮತ್ತಾಗಿ ತಿಳಿಯಬರುತ್ತವೆ. ಇವುಗಳನ್ನು ನೋಡುವುದಕ್ಕೆ ಜಗತ್ತಿನ ಅನೇಕ ಕಡೆಗಳಿಂದ ಕಲಾಭಿಜ್ಞರು ಬಂದು ನೋಡಿ ಮನದಣಿದು ಪ್ರಾಚೀನಕರ್ಣಾಟಕರನ್ನು ಹೊಗಳಿ ಹೋಗುತ್ತಿದ್ದಾರೆ.

ಇಂತಹ ಅಮೌಲ್ಯವಾದ ಪ್ರಾಚೀನವಸ್ತುಗಳನ್ನು ಕಾಪಾಡುವುದಕ್ಕಾಗಿ ನೈಜಾಮ್ ಉಸ್ಮಾನ್ ಆಲಿಯವರ ಅಪ್ಪಣೆಯಂತೆ ಮುಖ್ಯಮಂತ್ರಿಗಳಾದ ಸರ್ ಅಕ್ಬರ್. ಹೈದರಿಯವರ ಮತ್ತು ಅಲ್ಲಿಯ ಪ್ರಾಕ್ತನ ವಿಮರ್ಶಶಾಖೆಯ ಅಧಿಕಾರಿಗಳಾದ ಮ|| ಗುಲಾಂ ಯಾಜ್ದಾನಿಯವರ ನೇತೃತ್ವದಲ್ಲಿ ನೈಜಾಮಿ ಸರ್ಕಾರದವರು ಮೂವತ್ತು ಲಕ್ಷರೂಪಾಯಿಗಳಿಗಿಂತ ಹೆಚ್ಚಾಗಿ ವೆಚ್ಚಮಾಡಿ ಈ ಗವಿಗಳನ್ನೂ, ಈ ಗವಿಗಳ ಶಿಲ್ಪಗಳನ್ನೂ, ಚಿತ್ರಗಳನ್ನೂ ರಕ್ಷಿಸಿ ಜನರು ಹೋಗಿ ಬರುವಂತೆ ದಾರಿಗಳನ್ನೂ ಬಂಗಲೆಗಳನ್ನೂ ಮಾಡಿಸಿ, ಇಲ್ಲಿಯ ವಿಷಯಗಳನ್ನು ತಿಳಿಸುವುದಕ್ಕೆ ಜನರನ್ನು ನೇಮಿಸಿ, ಗ್ರಂಥಗಳನ್ನು ಬರೆದು ಪ್ರಕಟಿಸಿ ಕಲಾಭಿಮಾನಿಗಳಿಗೆ ಅತ್ಯಂತ ಉಪಕಾರವನ್ನು ಮಾಡಿದ್ದಾರೆ. ಈ ಕಾರಣದಿಂದ ಭಾರತೀಯ ಕಲಾಭಿಜ್ಞರು ನೈಜಾಮರನ್ನೂ ಅವರ ಸರ್ಕಾರವನ್ನೂ ಎಷ್ಟೆಂದು ಹೊಗಳಿದರೂ ತೀರದು.



ಮೈಸೂರು ವಿಶ್ವವಿದ್ಯಾನಿಲಯ

# ಪ್ರಚಾರಪುಸ್ತಕಮಾಲೆ

೧೯೩೮-೩೯ ರಲ್ಲಿ ಅಚ್ಚಾಗಿರುವ ಪುಸ್ತಕಗಳು:

ಸಾಧಾರಣ ಪ್ರತಿ ಒಂದಕ್ಕೆ ೨ ಆಣೆ, ಉತ್ತಮ ಪ್ರತಿ ಒಂದಕ್ಕೆ ೩

೧. ಖಗೋಳಶಾಸ್ತ್ರ ಪ್ರವೇಶ—
ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎ

೨. ಸಮಾಜದ ರೋಗ ರುಜಿನಗಳು—
ಜಿ. ಹನುಮಂತರಾವ್, ಎ

೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ.ಎ.

೪. ನವರತ್ನಗಳು—ಎಚ್. ಸುಬ್ಬಾಜೋಯಿಸ್, ಎಂ.ಎ

೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ, ಎ

೧೯೩೯-೪೦ ರಲ್ಲಿ ಅಚ್ಚಾಗಿರುವ ಪುಸ್ತಕಗಳು:

೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ.ಎ.

೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್,

೮. ಕನ್ನಡಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ.ಎ.

೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿ.ರ
ಎಂ.ಎ

೧೦. ಪಂಪ—ತೀ. ನಂ. ಶ್ರೀಕಂಠಯ್ಯ, ಎಂ.ಎ.

೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ.ಎಸ

೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎ

೧೩. ಮದುವೆ—ನಾ. ಕಸ್ತೂರಿ, ಎಂ.ಎ., ಬಿ.ಎಲ್.

೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾ

(ಪು.ತಿ.ನೋ.)

೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್,
ಎಂ.ಎಸ್‌ಸಿ., ಎಲ್‌ಎಲ್.ಬಿ.

೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.

೧೭. ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.

೧೯೪೦-೪೧ ರಲ್ಲೂ ಹನ್ನೆರಡು ಪುಸ್ತಕಗಳು ಅಚ್ಚಾಗುವುವು:

ಸಾಧಾರಣ ಪ್ರತಿ ೨ ಆಣೆ; ವಾರ್ಷಿಕ ಚಂದಾ ರೂ. ೧-೪-೦.

ಉತ್ತಮ ಪ್ರತಿ ೩ ಆಣೆ; ವಾರ್ಷಿಕ ಚಂದಾ ರೂ. ೨-೦-೦.

ವಿ.ಪಿ.ಪಿ. ಮೂಲಕ ಪುಸ್ತಕಗಳನ್ನು ತರಿಸಿಕೊಳ್ಳುವುದರ ಬದಲು ಮುಂಗಡವಾಗಿ ಹಣವನ್ನು ಕಳುಹಿಸಿ ತರಿಸಿಕೊಂಡರೆ ನಾಲ್ಕು ಆಣೆಗಳು ಉಳಿತಾಯವಾಗುವುವು.

೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್,
ಎಂ.ಎ.

೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—
ಪಿ. ಜಿ. ಸತ್ಯಗಿರಿನಾಥನ್, ಎಂ.ಎ.

೨೦. ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ,
ಬಿ.ಎ., ಎಂ.ಬಿ, ಬಿ.ಎಸ್.

೨೧. ಸಾರ್ವಜನಿಕ ವೆಚ್ಚ—ಎಂ. ಎಚ್. ಗೋಪಾಲ್,
ಎಂ.ಎ., ಪಿಎಚ್.ಡಿ.

೨೨. ಶಿಶುವಿಹಾರಗಳು—ಸಿ. ರಂಗಾಚಾರ್, ಬಿ.ಎಸ್‌ಸಿ.,
ಎಂ.ಎಡ್.

೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರೀ, ಎಂ.ಎ.

೨೪. ವಿಡಂಬನ—ಎಸ್. ವಿ. ರಂಗಣ್ಣ, ಎಂ.ಎ.

೨೫. ಅಜಂತ ಮತ್ತು ಎಲ್ಲೋರ—ಡಾ|| ಎಂ. ಎಚ್. ಕೃಷ್ಣ,
ಎಂ.ಎ., ಡಿ ಲಿಟ್.

---